




# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ

**ನುಡಿದರೆ ಮುತ್ತಿನ ಹಾರದಂತಿರಬೇಕು!**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು!**
**ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು!**
**ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು**
**ನುಡಿಯೊಳಗಾಗಿ ನಡೆಯದಿದ್ದರೆ**
**ಕೂಡಲಸಂಗಮದೇವನೆಂತೊಲಿವನಯ್ಯ?**

ಸಂಪುಟ : ೨೪
ಸಂಚಿಕೆ : ೦೪
ನವೆಂಬರ್ : ೨೦೨೧
ರೂ. ೧೫/-

## ಕ್ಷೇತ್ರ ವಾರ್ತೆಗಳು



**ಪರಿಷತ್ತಿನ ಕಾರ್ಯಕಾರಿ ಸಮಿತಿ ಸಭೆ (ಆನ್‌ಲೈನ್)**

ಬೆಂಗಳೂರು: ದಿನಾಂಕ: 0೫.೧೦.೨೦೨೧ ಚಿತ್ರದಲ್ಲಿ: ಕೊಂಡಜ್ಜಿ ಬ. ಷಣ್ಮುಖಪ್ಪ, ಎಸ್.ಎಂ. ಹಂಪಯ್ಯ, ಡಾ.ಸಿಂ.ರಾ. ಹೊನ್ನಲಿಂಗಯ್ಯ, ಡಾ.ಗೊ.ರು. ಚನ್ನಬಸಪ್ಪ, ಎಸ್.ಬಿ. ಅಂಗಡಿ, ಡಾ. ಕುರುವ ಬಸವರಾಜ್, ದಯಾನಂದ ಪಾಟೀಲ್, ಕೆ.ವಿ. ನಾಗರಾಜಮೂರ್ತಿ




**ಕದಳಿ ಮಹಿಳಾ ವೇದಿಕೆ, ಮೈಸೂರು: ಅಕ್ಕಮಹಾದೇವಿ ಜಯಂತಿ ಮತ್ತು ಕೃತಿಗಳ ಲೋಕಾರ್ಪಣೆ**

ದಿನಾಂಕ:೨೬.೯.೨೦೨೧ ಸಾನ್ನಿಧ್ಯ: ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಪರಮಪೂಜ್ಯ ಜಗದ್ಗುರು ಡಾ. ಶ್ರೀ ತೋಂಟದ ಸಿದ್ಧರಾಮ ಮಹಾಸ್ವಾಮಿಗಳು, ಚಿತ್ರದಲ್ಲಿ: ಸುಧಾ ಮೃತ್ಯುಂಜಯಪ್ಪ, ಎಂ.ಎ. ನೀಲಾಂಬಿಕಾ, ಶಾರದಾ ಶಿವಲಿಂಗಸ್ವಾಮಿ, ವೀಣಾ ಬನ್ನಂಜೆ, ಸುನಾಂದಾ ಪಾಲನೇತ್ರ, ಶಶಿಕಲಾ ಜೊಲ್ಲೆ, ಡಾ. ಗೊ.ರು. ಚನ್ನಬಸಪ್ಪ, ಪ್ರೊ. ಮಲೆಯೂರು ಗುರುಸ್ವಾಮಿ, ಮ.ಗು. ಸದಾನಂದಯ್ಯ, ಡಾ. ಸಿದ್ದಪ್ಪ



**ಬಾಗಲಕೋಟೆ: ಲಿಂ. ಡಾ. ಪದ್ಮಾ ಹಾಗೂ ಲಿಂ. ಶ್ರೀಮತಿ ಮಂಜುಳಾ ತಾಯಿ ಅಂಗಡಿ ಸ್ಮರಣಾರ್ಥ ರಾಜ್ಯಮಟ್ಟದ ವಿಚಾರಸಂಕಿರಣ**

ದಿ:೩.೧೦.೨೦೨೧ ಚಿತ್ರದಲ್ಲಿ: ಡಾ. ಚಂದ್ರಶೇಖರ ಹೆಗಡೆ, ಡಾ. ಎಸ್.ಡಿ. ಕೆಂಗಲಗುತ್ತಿ, ಎ.ಎಸ್. ಪಾವಟೆ, ಚಂದ್ರಶೇಖರ ಶೆಟ್ಟರ, ಷ.ಬ್ರ.ಶ್ರೀ ಗುರುಪಾದ ಶಿವಾಚಾರ್ಯರು, ಡಾ. ಶ್ರೀರಾಮ ಇಟ್ಟಣ್ಣವರ, ಗುರುರಾಜ ಲೂತಿ, ಸರೋಜಾ ಇಟ್ಟಣ್ಣವರ, ವಿಜಯಲಕ್ಷ್ಮಿ ಭದ್ರಶೆಟ್ಟಿ, ನಂದಾ, ಡಾ. ವಿದ್ಯಾ ಅಂಗಡಿ, ಉಮಾ ರೇವಡಿಗಾರ, ಡಾ. ರಾಜೇಶ್ವರಿ ಶೀಲವಂತ, ಸುನಂದಾ ಅಳ್ಳಗಿ, ಡಾ. ಆರ್.ಜಿ. ಅಳ್ಳಗಿ, ಡಾ. ಷಣ್ಮುಖಪ್ಪ ಅಂಗಡಿ, ವೀರಣ್ಣ ಗಂಗಾವತಿ



# ಮಹಾಮನೆ

ನವೆಂಬರ್ – ೨೦೨೧ ಸಂಪುಟ : ೨೪ ಸಂಚಿಕೆ : ೦೪



ಪ್ರಕಾಶಕರು
**ಗೊ.ರು. ಚನ್ನಬಸಪ್ಪ**
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ
ಜಯನಗರ ೮ನೆಯ ವಿಭಾಗ
ಬೆಂಗಳೂರು – ೫೬೦ ೦೭೦
ದೂ: ೦೮೦ – ೨೯೭೭ ೦೧೨೫
E-mail:
mahamanemagazine@gmail.com

ಸಂಚಿಕೆಯ ಅಂತರಂಗ

 

# ಭಾಷೆಯೆಂಬ ಮಂತ್ರದಂಡ

ನವೆಂಬರ್ ಅನ್ನು ದೇಶ-ಭಾಷೆಗಳ ಮಾಸವೆಂದೇ ಕರೆಯಲಾಗುತ್ತದೆ. ಭಾರತದ ಫೆಡರಲ್ ವ್ಯವಸ್ಥೆಯು ಭಾಷಾವಾರು ಪ್ರಾಂತ್ಯಗಳ ರಚನೆಗೆ ಮುಂದಾದದ್ದು, ಒಂದು ಐತಿಹಾಸಿಕವಾದ ಬೆಳವಣಿಗೆ. ಭಾರತದ ಒಕ್ಕೂಟ ವ್ಯವಸ್ಥೆಯನ್ನು ಅದು ಒಕ್ಕೂಟವಾಗಿಯೇ ಉಳಿಯುವಂತೆ ಮಾಡುವಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯ ಪಾತ್ರ ದೊಡ್ಡದು. ಇದು ಕೇವಲ ಭಾಷೆಗಳ ವಿಷಯವೆಂದು ತಿಳಿಯುವಂತಿಲ್ಲ. ಇದು ಭಾರತದ ಬಹುತ್ವ ಪಾತಳಿಗಳನ್ನು ಗುರುತಿಸಿ, ಗೌರವಿಸುವ ರಾಜಕೀಯ ಮತ್ತು ಸಾಂಸ್ಕೃತಿಕ ಸಂಗತಿಯೂ ಹೌದು.

ಭಾಷೆಯನ್ನು ಅದರ ಶಕ್ತಿ ಸಾಧ್ಯತೆಗಳನ್ನು ವಚನಕಾರರಂತೆ ಕಂಡವರು ಬಲು ಕಡಿಮೆ. ಭಾಷೆಯನ್ನು ವಚನಕಾರರು ಅರವಿಂದರು ಹೇಳುವಂತೆ 'ಮಂತ್ರವಾಕ್' ಆಗಿಯೂ ಬೇಂದ್ರೆಯವರು ಹೇಳುವಂತೆ 'ವಿಶ್ವದೊಳ್ನುಡಿಯಾಗಿ ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎನ್ನುವ ಸಾಧ್ಯತೆಯಲ್ಲಿಯೂ ವಚನಕಾರರು ಕನ್ನಡವನ್ನು ಬಳಸಿದರು. ಆ ತನಕ ಸ್ಥಾಪಿತವಾಗಿದ್ದ ಕನ್ನಡ ಭಾಷೆಯ ಜಾಯಮಾನವನ್ನೂ ಅದಕ್ಕಿದ್ದ ಶಿಷ್ಟತೆಯ ಕೃತಕತೆಯನ್ನೂ ಇವರು ತೊಡೆದುಹಾಕಿದರು. ಹೀಗೆ ಮಾಡುವ ಮೂಲಕ ಭಾಷೆಯೆನ್ನುವ ಅಧಿಕಾರ ಕೇಂದ್ರವನ್ನೇ ಇವರು ಒಡೆದು ವಿಕೇಂದ್ರೀಕರಣಗೊಳಿಸಿದರು. ವಚನಚಳುವಳಿಯ ಸಾರ್ವತ್ರಿಕತೆ ಮತ್ತು ಸಾರ್ವಕಾಲಿಕತೆಯಲ್ಲಿ ವಚನಗಳ ವಸ್ತುನಿರ್ವಹಣೆಯಷ್ಟೇ ಮಹತ್ವದ್ದು ಅವರ ಭಾಷಾ ಬಳಕೆ. ಕನ್ನಡ ಭಾಷೆಯನ್ನು ವಚನಕಾರರು ಕಾವ್ಯಕ್ಕೆ ಸಜ್ಜುಗೊಳಿಸಿದಷ್ಟೇ ಸಾಮಾಜಿಕ ಹೋರಾಟಕ್ಕೂ, ರಾಜಕೀಯ ಹೋರಾಟಕ್ಕೂ, ಸಾಂಸ್ಕೃತಿಕ ಅಭಿವ್ಯಕ್ತಿಗೂ ಸಜ್ಜುಗೊಳಿಸಿದರು. ವಚನಕಾರರ ಭಾಷೆಗೆ ಮಂತ್ರವಾಕ್‌ನ ಅಸಾಧಾರಣ ಶಕ್ತಿ ಬಂದದ್ದು ನಡೆ-ನುಡಿಯ ಅಂತರವನ್ನು ಆದಷ್ಟೂ ಕಡಿಮೆ ಮಾಡಿಕೊಳ್ಳುತ್ತ ಹೋದದ್ದರಲ್ಲಿ. ನಡೆ-ನುಡಿಗಳನ್ನು ಅಖಂಡವಾಗಿ ಬೆಸೆಯಬೇಕೆನ್ನುವುದು ವಚನಕಾರರ ಮೂಲ ಆಶಯಗಳಲ್ಲಿ ಒಂದು. ಬಸವಣ್ಣ ಹೇಳುವ ನುಡಿದರೆ ಮುತ್ತಿನ ಹಾರದಂತಿರಬೇಕು ಎನ್ನುವ ವಚನವು ನಾವು ಬಳಸುವ ಶಾಬ್ದಿಕ ಭಾಷೆಯನ್ನು ಕುರಿತದ್ದೂ ಹೌದು, ನಮ್ಮ ವ್ಯಕ್ತಿತ್ವದ ಭಾಷೆಯದ್ದೂ ಹೌದು. ಹಿಂದಿರುಗಿ ನೋಡಿದರೆ ಈಗಲೂ ಇದನ್ನೆಲ್ಲಾ ನೋಡಿದಾಗ ಬೆರಗು ಹುಟ್ಟುತ್ತದೆ. ಆಳುವವರ ಮತ್ತು ಆಳಿಸಿಕೊಳ್ಳುವವರ ದರ್ಪದ ಭಾಷೆಯಾಗಿದ್ದುದನ್ನು, ಪಂಡಿತರ ಕಾವ್ಯಭಾಷೆಯಾದುದನ್ನು ಇವರು ಸಂಪೂರ್ಣವಾಗಿ ವಿಸರ್ಜಿಸಿದರು. ಅದರ ಬದಲಿಗೆ ಇವರು ಆಹ್ವಾನಮಾಡಿಕೊಂಡದ್ದು ಮಣ್ಣಿನ ಭಾಷೆಯನ್ನು, ಎದೆಯ ಭಾಷೆಯನ್ನು. ನವೆಂಬರ್ ತಿಂಗಳ ಈ ಭಾಷಾ ಮಾಸದಲ್ಲಿ ವಚನಕಾರರ ಈ ಅಪ್ರತಿಮ ಸಾಧನೆಗೆ ಶರಣು.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**





# ಕನ್ನಡ ರಾಜ್ಯೋತ್ಸವ – ೬೬

ಇದು ಕನ್ನಡ ರಾಜ್ಯೋತ್ಸವದ ತಿಂಗಳು. ನವೆಂಬರ್ ೧ ಕನ್ನಡ ನಾಡಿನ ಒಂದು ಐತಿಹಾಸಿಕ ಸ್ಮರಣೆಯ ದಿನ. ಕಾಲಮಾನದಲ್ಲಿ ರಾಜಕೀಯ ಮತ್ತಿತರ ಕಾರಣಗಳಿಂದ ಅತ್ತಿತ್ತ ಚದುರಿಹೋಗಿದ್ದ ಕನ್ನಡಿಗರು ತಮ್ಮದೇ ಆದ ಒಂದು ಭೌಗೋಳಿಕ ನೆಲೆಯಲ್ಲಿ ಕೂಡಿಕೊಳ್ಳಲು ಅವಕಾಶವಾದ ದಿನ. ಈ ದಿನವನ್ನು ನಾಡಿನಾದ್ಯಂತ ರಾಜ್ಯೋದಯದ ದಿನವನ್ನಾಗಿ ಆಚರಿಸಲಾಗುತ್ತಿದೆ.

ಕನ್ನಡ ರಾಜ್ಯೋತ್ಸವ ಉಳಿದ ಸಾಂಪ್ರದಾಯಿಕ ಧಾರ್ಮಿಕ ಆಚರಣೆಯಲ್ಲ; ಅದು ಇಡೀ ಕನ್ನಡಿಗರ ಭಾವೈಕ್ಯತೆಯ ಸಾಂಸ್ಕೃತಿಕ ಹಬ್ಬ. ಆದರೆ, ಕರ್ನಾಟಕ ರಾಜ್ಯೋದಯದ ದಿನವಾದ ೧೯೫೬ರ ನವೆಂಬರ್ ೧ರಂದು ನಡೆದ ಪ್ರಥಮ ರಾಜ್ಯೋತ್ಸವದ ಸಂತಸ, ಸಡಗರ, ಸಂಭ್ರಮಗಳು ಈಗಲೂ ಉಳಿದಿವೆ ಎಂದು ನನಗೆ ಅನಿಸುವುದಿಲ್ಲ.

ಮೊದಲ ನಾಲ್ಕಾರು ವರ್ಷಗಳ ಹೊರತಾಗಿ, ಆನಂತರ ಅದೊಂದು ಸಾಂಕೇತಿಕ ಶಾಸ್ತ್ರಾಚರಣೆಯಾದಂತೆ ಕಾಣಿಸುತ್ತಿದೆ. ರಾಜ್ಯೋತ್ಸವ ದಿನಾಚರಣೆ ಎಂದರೆ, ಕನ್ನಡ ಬಾವುಟ ಹಾರಿಸುವುದು, ತಾಯಿ ಭುವನೇಶ್ವರಿಯ ಭಾವಚಿತ್ರವನ್ನಿಟ್ಟು ಹಾರ ಹಾಕುವುದು, ವೇದಿಕೆಯಲ್ಲಿ ಕನ್ನಡ ಕುರಿತು ಭಾಷಣ ಮಾಡುವುದು, ಒಂದಷ್ಟು ಕನ್ನಡ ಗೀತೆಗಳನ್ನು ಹಾಡುವುದು ಮತ್ತು ಕನ್ನಡಪರ ಘೋಷಣೆಗಳನ್ನು ಹಾಕುವುದು ಎಂದಾದಂತಿದೆ. ಜೊತೆಗೆ, ಒಂದು ದಿನದ ರಜಾ ಅನುಭವಿಸುವುದಾಗಿದೆ. ಇವೆಲ್ಲ ಒಂದು ಹಬ್ಬದ ಸಂಭ್ರಮದಲ್ಲಿ ಇರಬೇಕಾದದ್ದೇ.

ಆದರೆ, ಕನ್ನಡ ರಾಜ್ಯೋತ್ಸವ ದಿನಾಚರಣೆ ಕೇವಲ ಈ ಭೌತಿಕ ಆಚರಣೆಗಳಿಗೇ ಸೀಮಿತವಾಗಬಾರದು. ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಹಿರಿಯರ ನಿರೀಕ್ಷೆಯಂತೆ ಹೊಸನಾಡೊಂದನ್ನು ಕಟ್ಟುವ ಸಂಕಲ್ಪದ ಸಂದರ್ಭವಾಗಬೇಕು. ಈ ದಿನಾಚರಣೆಗಾಗಿ ಸರ್ಕಾರ ಘೋಷಿಸಿರುವ ರಜಾದ ಅವಧಿಯಲ್ಲಿ ಸಾರ್ವತ್ರಿಕ ಕನ್ನಡಪ್ರಜ್ಞೆ ಮೂಡಿಸುವ ಜಾಗೃತಿ ಕಾರ್ಯಗಳೂ ನಡೆಯುವಂತಾಗಬೇಕು. ಅಂತಹ ಕಾರ್ಯಗಳಲ್ಲಿ ಕನ್ನಡ ನಾಡಿನ ಇತಿಹಾಸ, ಕನ್ನಡದ ಸತ್ವ-ಸೌಂದರ್ಯ, ಕನ್ನಡದ ಹಿರಿಯರು, ಕನ್ನಡ ನಾಡಿನ ಶಿಲ್ಪ, ಲಲಿತ ಕಲೆ, ಪ್ರಾಕೃತಿಕ ಸೊಬಗು, ಪ್ರವಾಸಿ ತಾಣಗಳು – ಇತ್ಯಾದಿಗಳನ್ನು ಪರಿಚಯಿಸುವ ಸಾಹಿತ್ಯವನ್ನು ಮನೆ ಮನೆಗೆ ಮುಟ್ಟಿಸುವುದೂ ಮುಖ್ಯವಾಗುತ್ತದೆ. ಇದೊಂದು ರೀತಿಯಲ್ಲಿ ಆಂದೋಲನದಂತೆ ನಡೆಯಬೇಕು. ಜನಸಮುದಾಯದಲ್ಲಿ ಕನ್ನಡಪ್ರಜ್ಞೆಯುಂಟುಮಾಡುವಲ್ಲಿ ನಾವು ಯಶಸ್ವಿಯಾದರೆ, ಕನ್ನಡಕ್ಕೆ ಸಂಬಂಧಿಸಿದ ಇತರ ಹೋರಾಟಗಳಲ್ಲೂ ಯಶಸ್ವಿಯಾಗ ಬಹುದು.

ಕರ್ನಾಟಕ ರಾಜ್ಯ ನಿರ್ಮಾಣಗೊಂಡಾಗ ನಾಡಿನ ಹಿರಿಯ ಕವಿ ಡಿ.ಎಸ್. ಕರ್ಕಿ ಅವರು, "ಹೊಮ್ಮಿರಲು ಪ್ರೀತಿ, ಎಲ್ಲಿಯದು ಭೀತಿ?" ಎಂದಿದ್ದರು. ಆದರೆ, ಕನ್ನಡದ ಬಗೆಗೆ ಕನ್ನಡಿಗರಿಗಿರುವ ಅಂತಹ ಪ್ರೀತಿಯ ಕೊರತೆಯಿಂದಾಗಿ ನಮ್ಮ ಭಾಷೆ ಮತ್ತು

ಸಂಸ್ಕೃತಿಗಳು ಅನ್ಯಭಾಷೆ ಮತ್ತು ಅನ್ಯಸಂಸ್ಕೃತಿಗಳ ಹಾವಳಿಗೆ ತುತ್ತಾಗಿರುವ ಭೀತಿಯುಂಟಾಗಿದೆ. ಕನ್ನಡ ತಾಯ್ನುಡಿಯಾಗಿರುವವರೆಲ್ಲ ಒಂದು ನಾಡೆನಿಸಿ, ೬೫ ವರ್ಷಗಳು ಕಳೆದಿದ್ದರೂ, ನಮ್ಮ ಗಡಿ, ನುಡಿ, ಜಲ, ಉದ್ಯೋಗ ಸಮಸ್ಯೆಗಳು ಮತ್ತು ಅನ್ಯಿಗರ ವಲಸೆ ಸಮಸ್ಯೆಗಳು ಇನ್ನೂ ಕಾಡುತ್ತಲೇ ಇವೆ. ಈ ಸಮಸ್ಯೆಗಳ ಪರಿಹಾರಕ್ಕೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಮೇಲೆ ಒತ್ತಡ ಹೇರಲು ಕನ್ನಡಿಗರು ಹೋರಾಡಲೇಬೇಕಾಗಿದೆ. ಈ ಹೋರಾಟಕ್ಕಾಗಿ ಜನಜಾಗೃತಿ ಮತ್ತು ಹೋರಾಟಗಾರರ ಪ್ರಬಲ ಸಂಘಟನೆ ಅಗತ್ಯವಾಗುತ್ತದೆ.

ಬಹುಮುಖ್ಯವಾಗಿ, ನಾವು ನಮ್ಮ ಶಾಲಾ ಮಕ್ಕಳು ಮತ್ತು ಕಾಲೇಜು ವಿದ್ಯಾರ್ಥಿಗಳಲ್ಲಿ ತಾಯ್ನುಡಿ ಮತ್ತು ತಾಯ್ನೆಲಗಳ ಅಭಿಮಾನಗಳನ್ನು ಅಚ್ಚೊತ್ತಬೇಕಾಗಿದೆ. ಅದಕ್ಕಾಗಿ ಪಠ್ಯಕ್ರಮಗಳಲ್ಲಿ, ಮಾಧ್ಯಮಗಳಲ್ಲಿ, ಸಾಂಸ್ಕೃತಿಕ ಪ್ರದರ್ಶನಗಳಲ್ಲಿ ಕನ್ನಡ ನೆಲದ ಐತಿಹಾಸಿಕ ಪರಂಪರೆ ಮತ್ತು ಕನ್ನಡ ಭಾಷೆಯ ಸತ್ವ-ಸೌಂದರ್ಯಗಳನ್ನು ಬಿಂಬಿಸುವ ಕೆಲಸ ಆದ್ಯತೆಯ ಮೇಲೆ ನಡೆಯಬೇಕಾಗಿದೆ.

ನಮ್ಮ ಸಂವಿಧಾನದಲ್ಲೇ ರಾಷ್ಟ್ರೀಯ ಭಾಷೆಯಾಗಿ ಮನ್ನಣೆ ಪಡೆದಿರುವ ಕನ್ನಡದ ಘನತೆ-ಗಾಂಭೀರ್ಯಗಳನ್ನು, ಅದರ ಸ್ಥಾನ-ಮಾನಗಳನ್ನು, ಅದರ ನಿತ್ಯಬಳಕೆಯನ್ನು ಉಳಿಸಿಕೊಳ್ಳುವಲ್ಲಿ ನಾವು ಹಿಂಜರಿಯಬಾರದು. ಅದೊಂದು ಪ್ರತಿಷ್ಠೆಯಾಗಬೇಕು. ಕೇವಲ ನಮ್ಮ ನಿರಭಿಮಾನ-ನಿರಾಸಕ್ತಿಗಳಿಂದ, ಉಪೇಕ್ಷೆ-ಉದಾಸೀನಗಳಿಂದ ನಮ್ಮ ತಾಯ್ನುಡಿ ನಮ್ಮ ನೆಲದಲ್ಲೇ ತಬ್ಬಲಿಯಾಗುವಂತಾಗಬಾರದು. 'ಹುಟ್ಟುವಾಗ ಇದ್ದ ಹುಬ್ಬಿಗಿಂತ ನಂತರ ಬಂದ ಮೀಸೆಯದೇ ಅಬ್ಬರವಾಗಬಾರದು' ಎಂಬ ಮಾತಿನ ಅರ್ಥವನ್ನು ನಾವು ಗ್ರಹಿಸಬೇಕು.

'ಕನ್ನಡವೇ ಸತ್ಯ, ಕನ್ನಡವೇ ನಿತ್ಯ' ಎಂದಿದ್ದರು ಮಹಾಕವಿ ಕುವೆಂಪು. 'ಹೊಸೆದ ಹಾಗೆ ಹುರಿಗೊಳ್ಳುವ ಗುರಿತಾಗುವ ಕನ್ನಡ' ಎಂದಿದ್ದಾರೆ ಚೆನ್ನವೀರ ಕಣವಿ. "ಕನ್ನಡದ ಸೇವೆಯಿಂದಧಿಕಮೀ ಜಗದೊಳಗೆ ಇನ್ನಾವುದಯ್ಯ" ಎಂದಿದ್ದರು ಸಾಲಿ ರಾಮಚಂದ್ರರಾಯರು. ಹೀಗೆ 'ಕನ್ನಡವ ಬಿಟ್ಟರಿನ್ನಿಲ್ಲ' ಎಂದೇ ಹೇಳುತ್ತಿದ್ದ ನಮ್ಮ ನಾಡಿನ ಹಿರಿಯ ವಿದ್ವಾಂಸರು, ಚಿಂತಕರು ಸಮರ್ಪಣ ಭಾವದಿಂದ ಸೇವೆ ಸಲ್ಲಿಸುತ್ತ ಬಂದಿದ್ದಾರೆಂತಲೇ ಇಂದು ನಮ್ಮ ಕನ್ನಡ ಲೋಕಮನ್ನಣೆ ಪಡೆದ ಭಾಷೆಯಾಗಿದೆ. ಭಾಷೆಯಷ್ಟೇ ಅಲ್ಲ, ನಮ್ಮ ಬದುಕೇ ಆಗಿದೆ.

'ಕನ್ನಡಕ್ಕೇ ಆದ್ಯತೆ, ಕನ್ನಡಕ್ಕೇ ಮಾನ್ಯತೆ' ಎಂದು ಕನ್ನಡ ರಾಜ್ಯದಲ್ಲಿ ಅಲ್ಲದೆ ಮತ್ತೆಲ್ಲಿ ಹೇಳಲಾದೀತು? ಈ ಕೆಲಸವನ್ನು ಕನ್ನಡಿಗರಲ್ಲದೆ, ಕನ್ನಡ ಸರ್ಕಾರವಲ್ಲದೆ ಮತ್ತಾರು ಮಾಡುತ್ತಾರೆ?

ಈ ಹಿನ್ನೆಲೆಯಲ್ಲಿ, ನಮ್ಮ ರಾಜ್ಯೋತ್ಸವ ಸಂದರ್ಭ ನಾನು ಮೊದಲೇ ಹೇಳಿದಂತೆ ನಾಡು-ನುಡಿಗಳ ಹಿತರಕ್ಷಣೆಯ ಬಗೆಗೆ ಗಂಭೀರ ಚಿಂತನೆಯ ಸಂದರ್ಭವೂ ಆಗಬೇಕು. ಕನ್ನಡ-ಕನ್ನಡಿಗ-ಕರ್ನಾಟಕಗಳ ಸಮಗ್ರ ಅಭ್ಯುದಯಕ್ಕಾಗಿ ಕನ್ನಡಿಗರೆಲ್ಲ ನಿಷ್ಠೆಯ ಸೇವೆ ಸಲ್ಲಿಸುವಂತಾಗಬೇಕು. ಕರ್ನಾಟಕ ಸರ್ಕಾರವೂ ಕನ್ನಡಿಗರು ಮತ್ತು ಅವರ ಭಾಷೆ-ಸಂಸ್ಕೃತಿಗಳ ಸಂರಕ್ಷಣೆ ಮತ್ತು ಸಂವರ್ಧನೆಗೆ ಬದ್ಧವಾಗಿರಬೇಕು.

ಸಮಸ್ತ ಕನ್ನಡ ಬಂಧುಗಳಿಗೂ ಕನ್ನಡ ರಾಜ್ಯೋತ್ಸವದ ಶುಭಾಶಯಗಳು!

**– ಗೊ.ರು. ಚನ್ನಬಸಪ್ಪ**



# ದಾರ್ಶನಿಕ ಕವಿ ಡಾ. ಸಿದ್ಧಯ್ಯ ಪುರಾಣಿಕರು

**ಎಚ್.ಎಸ್. ಸಿದ್ಧಗಂಗಪ್ಪ**

*ನಂ. ೧೬೧೭, 'ಮಾತೃಶ್ರೀ', ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ*
*೮ನೆ ಬ್ಲಾಕ್, ವಿಶ್ವನೀಡಂ ಅಂಚೆ, ಸ್ಫೂರ್ತಿಧಾಮದ ಎದುರು*
*ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧*
*೯೮೪೫೫ ೬೫೮೭೧*

ಬಾಲ್ಯ – 'ಹಣ್ಣು, ಹಣ್ಣು' ಎಂದಿತು
ತಾರುಣ್ಯ – 'ಹೆಣ್ಣು ಹೆಣ್ಣು' ಎಂದಿತು
ವಾರ್ಧಕ್ಯ – 'ಹೊನ್ನು ಹೊನ್ನು' ಎಂದಿತು
ಮುಪ್ಪು – 'ಮಣ್ಣು ಮಣ್ಣು' ಎಂದಿತು
ಇದುವರೆಗು ನೀ ತುಳಿದೆ ಮಣ್ಣನ್ನು
ಇನ್ನೇನು ಅದು ತುಳಿಯಲಿದೆ ನಿನ್ನನ್ನು'

ದಾರ್ಶನಿಕ ಕವಿ ಡಾ. ಸಿದ್ಧಯ್ಯ ಪುರಾಣಿಕರು ಈ ಆರು ಸಾಲಿನ ಪುಟ್ಟ ಕವನದಲ್ಲಿ ಇಡೀ ಬದುಕಿನ ಚಿತ್ರಣವನ್ನು ಸರಳವಾಗಿ ಅರ್ಥಪೂರ್ಣವಾಗಿ ಮನಮುಟ್ಟುವಂತೆ ಪರಿಚಯ ಮಾಡಿಕೊಟ್ಟಿದ್ದಾರೆ. ಕವಿಯಾಗಿ, ಅಧುನಿಕ ವಚನಕಾರರಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ಮಕ್ಕಳ ಸಾಹಿತ್ಯ ರಚನೆಕಾರರಾಗಿ, ವಿಮರ್ಶಕರಾಗಿ, ಇತಿಹಾಸಕಾರರಾಗಿ, ಕತೆಗಾರರಾಗಿ, ಹಲವಾರು ಮೌಲಿಕ ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿ ಪ್ರಸಿದ್ಧರಾಗಿದ್ದಾರೆ. ದಕ್ಷ ಅಧಿಕಾರಿಯಾಗಿ ತಾವು ವಹಿಸಿಕೊಂಡ ಹುದ್ದೆಗಳಿಗೆ ಘನತೆ, ಗೌರವವನ್ನು ತಂದುಕೊಟ್ಟಿದ್ದರು. ಶ್ರದ್ಧೆ, ಕರ್ತವ್ಯನಿಷ್ಠೆ, ಮಾನವೀಯತೆ, ಅನುಕಂಪ, ಬಡವರ ಬಗ್ಗೆ ಕಾಳಜಿಯಿಂದ ಒಬ್ಬ ದಕ್ಷ ಜನಾನುರಾಗಿ ಆಡಳಿತಗಾರರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಬಸವಣ್ಣನವರ ಆದರ್ಶ, ಮಾನವೀಯ ಗುಣಗಳನ್ನು ಮೈಗೂಡಿಸಿಕೊಂಡು ಜೀವನದುದ್ದಕ್ಕೂ ಆಚರಣೆಗೆ ತಂದ ಅಪ್ಪಟ ಬಸವಾಭಿಮಾನಿಗಳಾಗಿದ್ದರು. ನಾಡು-ನುಡಿಯ ಬಗ್ಗೆ ಅಪಾರವಾದ ಅಭಿಮಾನವುಳ್ಳವರಾಗಿದ್ದರು.

ಹುಟ್ಟಿದ ಊರು ರಾಯಚೂರು ಜಿಲ್ಲೆಯ ಯಲಬುರಗಿ ತಾಲ್ಲೂಕಿನ ದ್ಯಾಂಪುರ. ಹುಟ್ಟಿದ ವರ್ಷ, ಜೂನ್ ೧೮, ೧೯೧೮, ಹಡೆದ ಪುಣ್ಯಜೀವಿಗಳು ತಂದೆ ಶರಣ ಕಲ್ಲಿನಾಥ ಶಾಸ್ತ್ರೀಯವರು, ತಾಯಿ ಶರಣೆ ದಾನಮ್ಮನವರು. ಬಸವಾದಿ ಶರಣರ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದ ಸುಸಂಸ್ಕೃತ ಕುಟುಂಬ. ಅತಿಥಿ ಸತ್ಕಾರ ಅವರ ಜೀವನದ ಭಾಗವಾಗಿತ್ತು. ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದ ಪ್ರತಿಭಾವಂತರು. ಡಾ. ಸಿದ್ಧಯ್ಯ ಪುರಾಣಿಕರ ಸಹೋದರರು ಶ್ರೀ ಅನ್ನದಾನಯ್ಯ ಪುರಾಣಿಕ. ಇನ್ನೊಬ್ಬ ಸೋದರ ಪ್ರೊ. ಬಸವರಾಜ

ಪುರಾಣಿಕ ಅವರು ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತರಾಗಿದ್ದರು. ಹಲವಾರು ಕೃತಿಗಳನ್ನು ನೀಡುವುದರ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದರು.

**ವೃತ್ತಿ** :ಕಂದಾಯ ಇಲಾಖೆಯಲ್ಲಿ ತಹಸೀಲ್ದಾರ ಆಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದ ಡಾ. ಸಿದ್ಧಯ್ಯ ಪುರಾಣಿಕರು ಅಸಿಸ್ಟೆಂಟ್ ಕಲೆಕ್ಟರ್, ಅಸಿಸ್ಟೆಂಟ್ ಕಮೀಷನರ್, ಅಸಿಸ್ಟೆಂಟ್ ರೆವಿನ್ಯೂ ಸೆಕ್ರೆಟರಿ, ಸ್ಥಾನಿಕ ಸ್ವರಾಜ್ಯ ಆಡಳಿತ ಸಚಿವರ ಕಾರ್ಯದರ್ಶಿ, ಕೃಷಿ ಯೋಜನೆ, ಹಾಗೂ ಪೂರೈಕೆ ಇಲಾಖೆಯ ಸಚಿವರ ಕಾರ್ಯದರ್ಶಿ, ಡೆಪ್ಯೂಟಿ ಕಲೆಕ್ಟರ್, ಹೀಗೆ ನಾನಾ ಹುದ್ದೆಗಳಲ್ಲಿ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆ, ದಕ್ಷತೆಯಿಂದ ಸೇವೆ ಸಲ್ಲಿಸಿದ ಶ್ರೀಯುತರು ೧೯೫೪ ರಲ್ಲಿ ಭಾರತೀಯ ನಾಗರಿಕ ಆಡಳಿತ ಸೇವೆಗೆ ಸೇರ್ಪಡೆಯಾದರು. ನಂತರ ಶಿಕ್ಷಣ ಇಲಾಖೆಯಲ್ಲಿ ಉಪಕಾರ್ಯದರ್ಶಿಯಾಗಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ನಿರ್ದೇಶಕರಾಗಿ, ಆರ್ಥಿಕ ಇಲಾಖೆಯಲ್ಲಿ ಡೆಪ್ಯೂಟಿ ಸೆಕ್ರೆಟರಿಯಾಗಿ, ಮಡಿಕೇರಿ ಹಾಗೂ ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಯಾಗಿ ಬಡವರ, ರೈತರ ಸಮಸ್ಯೆಗಳಿಗೆ ಸ್ಪಂದಿಸಿ, ನ್ಯಾಯ ದೊರಕಿಸಿಕೊಟ್ಟ ತೃಪ್ತಿ, ಸಂತೋಷ, ನೆಮ್ಮದಿ ಅವರದಾಗಿತ್ತು. ಲೇಬರ್ ಕಮೀಷನರ್ ಆಗಿ ಪದೋನ್ನತಿ ಹೊಂದಿ, ಬಹುಕಾಲದಿಂದಲೂ ನೆನಗುದಿಗೆ ಬಿದ್ದಿದ್ದ ಕಾರ್ಮಿಕರ ಸಮಸ್ಯೆಗಳನ್ನು ಬಗೆಹರಿಸಿ, ಅವರ ನ್ಯಾಯಸಮ್ಮತವಾದ ಬೇಡಿಕೆಗಳನ್ನು ಈಡೇರಿಸಿ ಕಾರ್ಮಿಕ ವರ್ಗದವರ ಪ್ರೀತಿ, ಗೌರವಗಳಿಗೆ ಪಾತ್ರರಾದರು. ೩೩ ವರ್ಷಗಳ ಕಾಲ ಸೇವೆ ಸಲ್ಲಿಸಿ, ಜೂನ್ ೧೯೭೪ರಲ್ಲಿ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದರು. ತಮ್ಮ ಸೇವಾವಧಿಯಲ್ಲಿ ಎಂದೂ ಅಧಿಕಾರಿ ಎಂಬ ದರ್ಪ ತೋರಲಿಲ್ಲ. ಅಧಿಕಾರ ಜನರ ಸೇವೆ ಮಾಡಲು ದೊರೆತ ಸುವರ್ಣಾವಕಾಶ, ಸೌಭಾಗ್ಯ ಎಂದು ಭಾವಿಸಿದ್ದರು. ಅವರೆಂದೂ ಅಧಿಕಾರಿ ಎಂದು ಬೀಗಲಿಲ್ಲ. ಶರಣರ ಬದುಕು, ಸಾಧನೆ, ಸಿದ್ಧಿಗಳನ್ನು ಚಿಕ್ಕಂದಿನಿಂದಲೇ ಅರ್ಥಮಾಡಿಕೊಂಡು ಮೈಗೂಡಿಸಿಕೊಂಡಿದ್ದ ಶ್ರೀಯುತರು, ಆಕಾಶದಲ್ಲಿ ತಲೆ ಎತ್ತಿ ಬೀಗುವ ತೆಂಗಾಗಲಿಲ್ಲ, ಭೂಮಿತಾಯಿಗೆ ತಲೆಬಾಗಿ ನಮಿಸುವ ಬಾಳೆಯಾದರು. ಅವರ ಮಾನವತೆಯ ಮೇಲೆ ಮಂದಾರವಾಗಿ ಅರಳಿದರು.

ದೊಡ್ಡ ಅಧಿಕಾರಿಯಾಗಿದ್ದರೂ ಸರಳತೆ, ಸಜ್ಜನಿಕೆಯ ಸಾಕಾರಮೂರ್ತಿಯಾಗಿದ್ದರು. ಚಿಕ್ಕವರೊಡನೆ ನಡೆದುಕೊಳ್ಳುತ್ತಿದ್ದ ರೀತಿ ಅವಿಸ್ಮರಣೀಯವಾದುದು. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಜಾನಪದ ವಿಭಾಗದ ಮುಖ್ಯಸ್ಥನಾಗಿ, ರಾಜ್ಯ ಸಂಚಾಲಕನಾಗಿ ಸೇವೆ ಸಲ್ಲಿಸುತ್ತಿದ್ದಾಗ ಜಿಲ್ಲಾ ಜನಪದ ಕಲಾ ಮೇಳಗಳನ್ನು ವ್ಯವಸ್ಥೆಮಾಡುವ ಹೊಣೆಗಾರಿಕೆ ನನ್ನದಾಗಿತ್ತು. ಬೆಳಗಾವಿ, ರಾಯಚೂರು, ಬಿಜಾಪುರ ಜಿಲ್ಲೆಗಳಲ್ಲಿ ನಡೆದ ಕಲಾಮೇಳಗಳಲ್ಲಿ ಡಾ. ಸಿದ್ಧಯ್ಯ ಪುರಾಣಿಕರು ಅತಿಥಿಗಳಾಗಿ ಭಾಗವಹಿಸಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ, ಡಾ. ಎಚ್.ಎಲ್. ನಾಗೇಗೌಡ, ಡಾ. ಸಿದ್ಧಯ್ಯ ಪುರಾಣಿಕರೊಡನೆ ಪ್ರಯಾಣ ಮಾಡುವ ಸದಾವಕಾಶ ನನ್ನದಾಗಿತ್ತು. ಆಗ ಅವರು ನನ್ನ ಬರವಣಿಗೆ, ಕೆಲಸದ ಬಗ್ಗೆ ಮೆಚ್ಚುಗೆ ಮಾತನಾಡಿ, ಪ್ರೋತ್ಸಾಹಿಸುತ್ತಿದ್ದುದು ಇನ್ನೂ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿದೆ. ಅವರು ಮಾತನಾಡುತ್ತಿದ್ದರೆ ಜೇನಿನ ಹೊಳೆಯೇ ಹರಿದಂತೆ ಭಾಸವಾಗುತ್ತಿತ್ತು. ಯಾರ ಮನಸ್ಸನ್ನು ನೋಯಿಸದ ಮೃದುವಾದ ಮಾತುಗಳು ಅಪ್ಯಾಯಮಾನವಾಗಿತ್ತು.



**ಕುಟುಂಬ** : ತಮ್ಮ ೨೫ನೇ ವಯಸ್ಸಿನಲ್ಲಿಯೇ ಗಿರಿಜಾದೇವಿಯವರನ್ನು ಕೈಹಿಡಿಯುವುದರ ಮೂಲಕ ದಾಂಪತ್ಯ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಸತಿ ಪತಿಗಳಿಗೊಂದಾದ ಭಕ್ತಿ, ಮೂರು ಜನ ಹೆಣ್ಣು ಮಕ್ಕಳು, ಒಬ್ಬ ಮಗ. ತಮ್ಮ ಬಾಳ ಸಂಗಾತಿಯ ಬಗ್ಗೆ ಅಪಾರವಾದ ಪ್ರೀತಿ, ಗೌರವವನ್ನಿಟ್ಟುಕೊಂಡಿದ್ದರು. ಅವರು ಒಂದು ಕಡೆ 'ನಾನು ಸಾಹಿತಿಯಾಗಿ ಬೆಳೆಯುವುದಕ್ಕೆ ಮತ್ತು ಅಧಿಕಾರದಲ್ಲಿ ಪ್ರಾಮಾಣಿಕನಾಗಿ ಉಳಿಯಲಿಕ್ಕೆ ಕಾರಣ ನನ್ನ ಹೆಂಡತಿಯೇ ಹೊರತು ಬೇರೆ ಯಾರೂ ಇಲ್ಲ. ನನ್ನ ಸಾಹಿತ್ಯಕ್ಕೆ ಸ್ಫೂರ್ತಿಯ ಸೆಲೆ ಆಗಿ, ನನಗೆ ಶಕ್ತಿಯಾಗಿ ಬೆಂಬಲವಿತ್ತಿದ್ದಾಳೆ. ನನ್ನ ಲೇಖನಿಗೆ ಚೈತನ್ಯ ತುಂಬಿದವಳೂ ಅವಳೆ, ನನ್ನ ಸರ್ಕಾರಿ ಕಛೇರಿಗಳ ಕೆಲಸವನ್ನು ನಿರ್ಯೋಚನೆಯಿಂದ ನಡೆಸಿಕೊಂಡು ಹೋಗಲು ಸಹಕರಿಸಿದವಳೂ ಅವಳೆ' ಎಂದಿದ್ದರು. ಅವರ ಈ ಮಾತುಗಳು ಹಾಲು-ಜೇನಿನಂತೆ ದಾಂಪತ್ಯ ಜೀವನಕ್ಕೆ ಭಾಷ್ಯ ಬರೆದಂತಿವೆ.

**ಸಾಹಿತ್ಯ ಕ್ಷೇತ್ರ** : ಸರ್ಕಾರದಲ್ಲಿ ಉನ್ನತ, ಜವಾಬ್ದಾರಿಯುತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರೂ, ಸಾಹಿತ್ಯ ಕ್ಷೇತ್ರದಲ್ಲಿನ ಒಲವಿನಿಂದ ಒಬ್ಬ ಕ್ರಿಯಾಶೀಲ, ಸೃಜನಶೀಲ ಸಾಹಿತಿಯಾಗಿ ಪ್ರಸಿದ್ಧರಾದರು. ಸದಾ ಅಧ್ಯಯನಶೀಲರಾಗಿದ್ದ ಶ್ರೀಯುತರು ತಮ್ಮ ಲೇಖನಿಯಿಂದ ಅನೇಕ ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಅವರ ಕಾವ್ಯ, ವಚನ ಬರಹಗಳಲ್ಲಿ ಜೀವನ ಸ್ಪಂದನೆಯಿದೆ. ಜೀವಾನುಭವದ ರಸಪಾಕವಿದೆ. ಅನುಭವ, ಅನುಭಾವವಿದೆ. ಸರಳವಾಗಿದ್ದರೂ ಸಂಕೀರ್ಣತೆಯಿದೆ, 'ಕಾವ್ಯಾನಂದ' ಕಾವ್ಯನಾಮದಿಂದ ಪ್ರಸಿದ್ಧರಾದ ಡಾ. ಸಿದ್ಧಯ್ಯ ಪುರಾಣಿಕರು ಆಡಳಿತ ಮತ್ತು ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಪ್ರತಿಭೆಯನ್ನು ತೋರಿದ ಮಹಾನ್ ಸಾಧಕರು.

ಡಾ. ಮಾಸ್ತಿ ವೆಂಕಟೇಶ್ ಅಯ್ಯಂಗಾರ, ಡಾ. ಎಚ್.ಎಲ್. ನಾಗೇಗೌಡ ಹಾಗೂ ಡಾ. ಸಿದ್ಧಯ್ಯ ಪುರಾಣಿಕರು – ಈ ಮೂರು ಜನ ತ್ರಿಮೂರ್ತಿಗಳು ಭಾರತೀಯ ಆಡಳಿತ ಸೇವೆಯಲ್ಲಿ ಉನ್ನತ ಹುದ್ದೆಯಲ್ಲಿ ಸಮರ್ಥವಾಗಿ ಸೇವೆ ಸಲ್ಲಿಸಿದವರು. ಅಷ್ಟೇ ಸಮರ್ಥವಾಗಿ ಸಾಹಿತ್ಯ ಕ್ಷೇತ್ರದಲ್ಲಿಯೂ ಸೇವೆ ಸಲ್ಲಿಸಿ ಧೃವತಾರೆಗಳಾಗಿದ್ದಾರೆ.

ಆಧುನಿಕ ವಚನಕಾರರಲ್ಲಿ ಪ್ರಸಿದ್ಧರಾದ ಡಾ. ಜಚನಿ, ಪ್ರೊ. ಎಸ್.ವಿ. ರಂಗಣ್ಣ, ಪ್ರೊ. ಎಸ್.ವಿ. ಪರಮೇಶ್ವರ ಭಟ್ಟ, ಶ್ರೀ ಮೂಜಗಂ ಅವರ ಸಾಲಿನಲ್ಲಿ ಡಾ. ಸಿದ್ಧಯ್ಯ ಪುರಾಣಿಕರೂ ಒಬ್ಬರೂ ಎಂದು ಹೇಳಲು ಅಭಿಮಾನವೆನಿಸುತ್ತದೆ. 'ವಚನೋದ್ಯಾನ' ಅವರ ಒಂದು ಶ್ರೇಷ್ಠ ವಚನ ಗ್ರಂಥ. ಈ ಗ್ರಂಥದಲ್ಲಿ ೫೨೫ಕ್ಕೂ ಹೆಚ್ಚು ವಚನಗಳಿವೆ. "ಸ್ವತಂತ್ರ ಧೀರ ಸಿದ್ಧೇಶ್ವರ' ವಚನಾಂಕಿತದಲ್ಲಿ ಬರೆದ ವಚನಗಳು ಜೀವನಕ್ಕೆ ಹತ್ತಿರವಾಗಿದ್ದು ಮತ್ತೆ ಮತ್ತೆ ಓದಬೇಕೆನಿಸುತ್ತದೆ. ಭಾಷೆ ಮತ್ತು ಬಂಧದ ದೃಷ್ಟಿಯಿಂದ ಬಸವಾದಿ ಶರಣರ ವಚನಗಳ ಸತ್ವವನ್ನು ನೆನಪಿಗೆ ತರುತ್ತವೆ. ಉದಾಹರಣೆಗಾಗಿ ಅವರ ಒಂದೆರಡು ವಚನಗಳನ್ನು ಉಲ್ಲೇಖಿಸಬಹುದು.

**'ನಿನ್ನನರಿವುದೆ ಸ್ವರ್ಗ, ನಿನ್ನ ಮರೆವುದೆ ನರಕ,**
**ನಿನ್ನ ನೆನಹೇ ಜೀವನ, ನಿನ್ನ ಮರವೇ ಮರಣ,**
**ನೀನೆಂಬುದೇ ಪುಣ್ಯ, ನಾನೆಂಬುದೇ ಪಾಪ,**

ಎಲ್ಲಾ ನಿನ್ನಿಂದ ಎಂಬುದೇ ಸತ್ಯ,
ನನ್ನಿಂದ ಎಂಬುದೇ ಮಿಥ್ಯ, ನನಗಾಗಿ ಮಾಡಿದರೆ ಬಂಧನ,
ನಿನಗಾಗಿ ನಿನ್ನವರಿಗಾಗಿ ಮಾಡಿದರೆ ನಿರ್ಬಂಧನ,
ನೀನಿಲ್ಲದಿಲ್ಲವೆಂಬುದೆ ಜ್ಞಾನ, ಇದೆ ಎಂಬುದೇ ಅಜ್ಞಾನ,
ನಿನ್ನನ್ನು ನಿನಗಾಗಿ ಪ್ರೀತಿಸುವುದು ಭಕ್ತಿ,
ನಿನ್ನನು ನನಗಾಗಿ ಪ್ರೀತಿಸುವುದು ಶಕ್ತಿಯಯ್ಯ,
ಸ್ವತಂತ್ರ ಧೀರ ಸಿದ್ಧೇಶ್ವರಾ'।

ಸದ್ಭಕ್ತನ ದೃಷ್ಟಿಯಿಂದ ಸ್ವರ್ಗ–ನರಕಗಳು, ಸತ್ಯ–ಮಿಥ್ಯಗಳ ಮೊದಲಾದವುದರ ಬಗ್ಗೆ ವ್ಯಾಖ್ಯಾನ ಈ ವಚನದಲ್ಲಿದೆ.

"ಫಲವಿತ್ತ ರೆಂಬೆ ಬಾಗುತ್ತದೆ,
ಗೊನೆ ಹೊತ್ತ ಬಾಳೆ ಬಾಗುತ್ತದೆ
ತೆನೆ ಹೊತ್ತ ದಂಟು ಬಾಗುತ್ತದೆ,
ಏನೇನೂ ಇಲ್ಲದುದು ಬೀಗುತ್ತದೆ ನೋಡಾ –
ಸ್ವತಂತ್ರ ಧೀರ ಸಿದ್ಧೇಶ್ವರಾ" (೧೮೫)
"ಆಯುಷ್ಯವೆಲ್ಲ ಅನಾರೋಗ್ಯವನ್ನು ಸಹಿಸಿದೆ
ಬೆಂಕಿಯಲ್ಲದ ಬೆಂಕಿಯಲ್ಲಿ ದಹಿಸಿದೆ,
ಅನಾರೋಗ್ಯವೂ ನಿನ್ನ ದಾನವೆಂದು ಗ್ರಹಿಸಿದೆ,
ನೀನಿತ್ತ ಕಾಯಕವನ್ನು ಕೈಲಾದನಿತು ನಿರ್ವಹಿಸಿದೆ;
ಇನ್ನೇನ ಮಾಡಲಾಪೆನಯ್ಯಾ ನಾನು ?
ಓದುವ ಹುಚ್ಚನ್ನಿತ್ತು ಬಿಡುವಿಲ್ಲದೆ ಮಾಡಿದೆ,
ಬರೆವ ಹುಚ್ಚನ್ನಿತ್ತು ಹೊತ್ತು ಸಿಕ್ಕದಂತೆ ಮಾಡಿದೆ,
ಸೇವೆಯ ಹುಚ್ಚನ್ನಿತ್ತು ಸ್ವಾಸ್ಥ್ಯವಿಲ್ಲದಂತೆ ಮಾಡಿದೆ,
ನಿನಗೇ ಇಷ್ಟವಿಲ್ಲದರೆ ನನಗಾವ ನಷ್ಟ ?
ಸಾಧನೆಗೆ ಸಾಧ್ಯತೆ ಇಲ್ಲವಾದುದೇ ಕರಕಷ್ಟ !
ಒಂದು ಮಾತ್ರ ಸ್ಪಷ್ಟ
ನೀನಿತ್ತುದರಲ್ಲಿಯೇ ನಾನು ತುಷ್ಟ
ಸ್ವತಂತ್ರಧೀರ ಸಿದ್ಧೇಶ್ವರಾ."

ಡಾ. ಸಿದ್ಧಯ್ಯ ಪುರಾಣಿಕರು ವಚನ ರಚನೆಯಲ್ಲಿ ಸಿದ್ಧಹಸ್ತರಾದಂತೆ, ಕಾವ್ಯ ರಚನೆಯಲ್ಲಿಯೂ ಸಿದ್ಧಹಸ್ತರಾಗಿದ್ದರು. "ಕಾದಿ ಕ್ಷತ್ರಿಯನಾಗು, ಓದಿ ಬ್ರಾಹ್ಮಣ ನಾಗು, ಏನಾದರೂ ಆಗು ಮೊದಲು ಮಾನವನಾಗು" ಎಂಬ ಜೀವನದ ದಿವ್ಯಸಂದೇಶವನ್ನು ನೀಡಿದ ದಾರ್ಶನಿಕ ಕವಿ, ಅನೇಕ ಸೃಜನಾತ್ಮಕ, ಶ್ರೇಷ್ಠ ಕವಿತೆಗಳನ್ನು ನೀಡಿದ್ದಾರೆ.

ಯಾರು ಹಿತವರು ನಿನಗೆ ಈ ಮೂವರೊಳಗೆ !
ನೀನಿತ್ತ ಕಸ ನುಂಗಿ ರಸವನೀಯುವ ಮಣ್ಣೋ !



ಬೆಂಕಿಯೊಳು ಸುಟ್ಟು ಅಲಂಕಾರವಾಗುವ ಹೊನ್ನೋ !
ಬಾಳಹಣತೆಯೊಳೆಣ್ಣೆಯಾಗಿ ಉರಿಯುವ ಹೆಣ್ಣೋ !
ಬಾಳ ಕಡಲಲಿ ಮುಳುಗಿ ಮೂರು ಮುತ್ತನು ತಂದೆ
'ಸ್ನೇಹ, ಸೈರಣೆ, ಮಮತೆ' ಎಂದು ಕರೆದೆ
ಬಾಳ ಬನದಲಿ ತಿರುಗಿ ಮೂರು ಫಲಗಳ ತಂದೆ
'ದಿಟ, ಚೆಲುವು, ಬಲವುಗಳು' ಎಂದು ಬರೆದೆ,

ಜೀವನ ಸುಂದರವಾಗಿರಲು 'ಸ್ನೇಹ, ಸೈರಣೆ, ಮಮತೆ' ಬೇಕು ಎಂಬುದನ್ನು ಸರಳವಾಗಿ ಮನಮುಟ್ಟುವಂತೆ ಹೇಳಿದ್ದಾರೆ. ಅವರ ಒಂದೊಂದು ಕವನಗಳು ಜೀವನಕ್ಕೆ ಸಂದೇಶವನ್ನು ನೀಡುವ ಸುಂದರ ಕಾವ್ಯಪುಷ್ಪಗಳು. ಅವರಿಗೆ ಕನ್ನಡ, ಸಂಸ್ಕೃತ, ಇಂಗ್ಲೀಷ್, ಉರ್ದು, ಮರಾಠಿ, ಪರ್ಷಿಯನ್ ಮೊದಲಾದ ಭಾಷೆಗಳ ಪರಿಚಯವಿತ್ತು.

ಸಾಹಿತ್ಯ ಕ್ಷೇತ್ರ : ಜಲಪಾತ, ಕರುಣಾಶ್ರಾವಣ, ಮಾನಸ ಸರೋವರ, ಕಲ್ಲೋಲ ಮಾಲೆ, ಮೊದಲು ಮಾನವನಾಗು, ಚರಗ, ಹಾಲ್ದೆನೆ, ಮರುಳಸಿದ್ಧನ ಕಂತೆ ಕವನ ಸಂಕಲಗಳು ವಚನೋದ್ಯಾನ, ವಚನ ನಂದನ, ವಚನರಾಮ, ವಚನ ಸಂಗ್ರಹಗಳು, ಆತ್ಮಾರ್ಪಣ, ಭಾರತವೀರ, ರಜತರೇಖೆ, ಭಗ್ನನೂಪುರ ನಾಟಕಗಳನ್ನು, ಕಥಾಮಂಜರಿ, ತುಷಾರಹಾರ ಕಥಾ ಸಂಕಲನಗಳು, ತುಪ್ಪಾ ರೊಟ್ಟಿಗೇ ಗೇಗೇ, ಗಿಲ್‌ಗಿಲ್ ಗಿಲಗಚ್ಚಿ, ತಿರುಗಲೆ ತಿರುಗಲೆ ತಿರುಗುಯ್ಯಾಲೆ, ಬಣ್ಣ ಬಣ್ಣ ಓಕುಳಿ ಭಾರತವೆಲ್ಲಕೆ, ಬಾವುಟವೊಂದೇ ಮಕ್ಕಳ ಸಾಹಿತ್ಯ ಕೃತಿಗಳು, ಶರಣ ಚರಿತಾಮೃತ, ಸಿದ್ಧರಾಮ, ಬಸವಣ್ಣನವರ ಜೀವನ ಹಾಗೂ ಸಂದೇಶ, ನಜೀರ್ ಅಕಬರಾಬಾದಿ, ಹರ್ಡೇಕರ್ ಮಂಜಪ್ಪ, ಮಿರ್ಜಾ ಗಾಲಿಬ್, ಮಹಾದೇವಿ, ಅಲ್ಲಮಪ್ರಭು ಜೀವನ ಚರಿತ್ರೆಗಳನ್ನು ಲೋಕಾರ್ಪಣೆ ಮಾಡಿದ್ದಾರೆ.

ಡಾ. ಸಿದ್ಧಯ್ಯ ಪುರಾಣಿಕರು ಹನ್ನೆರಡಕ್ಕೂ ಹೆಚ್ಚು ಕೃತಿಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಸುಬೋಧಸಾರ, ಶ್ರೀಕಾರ, ಪ್ರಬಂಧಮಾಲೆ, ಪದ್ಯ ರತ್ನಾಕರ, ಮಹಾತ್ಮ ಕನಕದಾಸರ ಪ್ರಶಸ್ತಿ, ಶರಣ ಪ್ರಸಾದ, ಮಣಿಹ, ಬಸವದರ್ಶನ (ಹಿಂದಿ), ಬಸವ ಮತ್ತು ದಲಿತೋದಯ, ಬಸವ ಮತ್ತು ವಿಚಾರವಾದ ಮೊದಲಾದವುಗಳನ್ನು ಹೆಸರಿಸಬಹುದು. ಅಲ್ಲದೆ ಇವರ ಅನೇಕ ಕೃತಿಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಂಡಿವೆ.

ಗೌರವ ಡಾಕ್ಟರೇಟ್ : ಡಾ. ಸಿದ್ಧಯ್ಯ ಪುರಾಣಿಕರು, ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಮನಗಂಡು ಕರ್ನಾಟಕ ವಿಶ್ವವಿದ್ಯಾಲಯ ೧೯೭೬ ರಲ್ಲಿ ಗೌರವ ಡಾಕ್ಟರೇಟ್‌ನ್ನು ನೀಡಿ ಗೌರವಿಸುವುದರ ಮೂಲಕ ತನ್ನನ್ನು ತಾನೇ ಗೌರವಿಸಿ ಕೊಂಡಿತು. ಆ ಸಂದರ್ಭದಲ್ಲಿ ಅವರು ಪ್ರತಿಕ್ರಿಯಿಸುತ್ತಾ "ವಿಶ್ವವಿದ್ಯಾನಿಲಯದವರೇನೋ ನನಗೆ ಪದವಿಯಿತ್ತರು, ಆದರೆ ಶಿವನ ವಿದ್ಯಾಲಯದಲ್ಲಿ ಪದವಿ ಲಭಿಸುವುದೆಂದು" ಎಂದು ಹೇಳಿದ್ದರು. ಈ ಸಂದರ್ಭವನ್ನು ವಚನ ಒಂದರಲ್ಲಿ ಹೀಗೆ ಅಭಿವ್ಯಕ್ತಿಗೊಳಿಸಿದ್ದಾರೆ.

"ಪದವಿದಾನ ಸಮಾರಂಭಕ್ಕೆ ಕರೆದಿರುವರಯ್ಯಾ
ಮತ್ತೊಂದು ಪದವಿಯ ಕೊಡುವರಂತೆ !

**ನಿನ್ನ ಪದಭಕ್ತನಾಗಿಹುದೇ ಪರಮ ಪದವಿ ನನಗೆ**
**ಮತ್ತೇಕೆ ಕೊಡುವರೋ ಮತ್ತೊಂದು ಪದವಿಯನು**
**ಹೊಸದೊಂದು ಉಪಾಧಿಯನು**
**ಬಯಸದೆ ಬಂದ ಲಿಂಗಭೋಗವಿದು**
**ಬಿಡುವಂತೆಯೂ ಇಲ್ಲ; ಹಿಡಿಯುವಂತೆಯೂ ಇಲ್ಲ !**
**ನನ್ನ ಮೂಲಕ ನಿನ್ನವರಿಗೆ ಸಲ್ಲಿಸಿದನು**
**ಸ್ವತಂತ್ರಧೀರ ಸಿದ್ಧೇಶ್ವರಾ !**

ಡಾ. ಸಿದ್ಧಯ್ಯ ಪುರಾಣಿಕರದು ಕಲ್ಮಶವಿಲ್ಲದ ಪರಿಶುದ್ಧವಾದ ಮನಸ್ಸು. ಅವರ ನಡೆ ನುಡಿಗಳಲ್ಲಿ ಏಕತಾನತೆಯಿತ್ತು.

**ಪ್ರಶಸ್ತಿ ಗೌರವ :** 'ವಚನೋದ್ಯಾನ' ಕೃತಿಗೆ ಕಲ್ಕತ್ತಾದಲ್ಲಿರುವ ಭಾರತೀಯ ಭಾಷಾ ಪರಿಷತ್ತು ಸೃಷ್ಟ್ಯಾತ್ಮಕ ಕೃತಿಗಳಿಗೆ ನೀಡುವ ರಾಷ್ಟ್ರೀಯ ಪುರಸ್ಕಾರ ಹನ್ನೊಂದು ಸಾವಿರ ನಗದು ಬಹುಮಾನದೊಂದಿಗೆ ೧೯೭೭ ರಲ್ಲಿ ದೊರೆಯಿತು. ಈ ಸಂಸ್ಥೆಯಿಂದ ಪ್ರಪ್ರಥಮವಾಗಿ ಪಡೆದ ಕನ್ನಡಿಗರಲ್ಲಿ ಡಾ. ಸಿದ್ಧಯ್ಯ ಪುರಾಣಿಕರು ಮೊದಲಿಗರೆಂಬುದು ಅಭಿಮಾನದ ಸಂಗತಿ. ಇದೇ ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ದೊರೆತಿದೆ. ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಮಾಳವಾಡ ಪ್ರಶಸ್ತಿಯ ಗೌರವಕ್ಕೂ ಭಾಜನರಾಗಿದ್ದರು.

ನಿವೃತ್ತಿಯ ನಂತರ ಹಲವಾರು ಸಂಘ ಸಂಸ್ಥೆಗಳು ಅವರ ಸೇವೆಯನ್ನು ಬಳಸಿಕೊಳ್ಳಲು ಮುಂದಾದರೂ ಅವರು ಪ್ರೀತಿಯ ಅಹ್ವಾನವನ್ನು ನಯವಾಗಿ ನಿರಾಕರಿಸಿದರು. ಆದರೆ ಬಸವ ಸಮಿತಿಯ ಪದಾಧಿಕಾರಿಗಳ ಪ್ರೀತಿಯ ಆಹ್ವಾನಕ್ಕೆ ಕಟ್ಟುಬಿದ್ದು 'ಬಸವ ಜರ್ನಲ್' ಆಂಗ್ಲ ತ್ರೈಮಾಸಿಕ ಹಾಗೂ 'ಬಸವ ಪಥ' ಕನ್ನಡ ದ್ವೈಮಾಸಿಕ ಪತ್ರಿಕೆಗಳಿಗೆ ಪ್ರಧಾನ ಸಂಪಾದಕರಾಗಿ, ಬಸವ ಸಮಿತಿಯ ಸಂಶೋಧನೆ ಮತ್ತು ಪ್ರಕಟಣೆಗಳ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದರು. ಅವರು ಕುಳಿತ ಕುರ್ಚಿಯ ಮೇಲೆ ಕುಳಿತು ನಿರ್ದೇಶಕನಾಗಿ ಸೇವೆ ಸಲ್ಲಿಸುವ ಸೌಭಾಗ್ಯ ನನ್ನದಾಗಿತ್ತು ಎಂದು ಹೇಳಲು ಅಭಿಮಾನವೆನಿಸುತ್ತದೆ. ಅವರಿಗೆ ೭೫ ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಶ್ರೀ ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ರಚಿತಗೊಂಡ ಅಭಿನಂದನಾ ಸಮಿತಿ ರಾಜ್ಯಮಟ್ಟದಲ್ಲಿ ಅಭಿನಂದನಾ ಸಮಾರಂಭವನ್ನು ಏರ್ಪಡಿಸಿ ಅರ್ಥಪೂರ್ಣವಾಗಿ ಆಚರಿಸಿದ್ದು ನನ್ನ ಮನಸ್ಸಿನಲ್ಲಿ ಈಗಲೂ ಹಚ್ಚಹಸಿರಾಗಿದೆ. ಸಾವಿರಾರು ಜನ ಅಭಿಮಾನಿಗಳು, ಸಾಹಿತಿ, ವಿದ್ವಾಂಸರು ಈ ಸಮಾರಂಭದಲ್ಲಿ ಭಾಗಿಯಾಗಿ ಯಶಸ್ವಿಗೊಳಿಸಿದರು.

**ಸಿದ್ಧಗಂಗಾ ಮಠದೊಂದಿಗೆ :** ಶ್ರೀ ಸಿದ್ಧಗಂಗಾ ಮಠ ಹಾಗೂ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೊಂದಿಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿ ಪರಮಪೂಜ್ಯ ಶ್ರೀಗಳವರಿಂದ ಆಶೀರ್ವಾದ ಪಡೆದು ಧನ್ಯರಾಗಿದ್ದರು. ಪೂಜ್ಯ ಶ್ರೀಗಳವರ ಪಟ್ಟಾಧಿಕಾರ ಸಮಾರಂಭದಲ್ಲಿ ಹೊರತಂದ 'ಸಿದ್ಧಗಂಗಾ' ಬೃಹತ್ ಗ್ರಂಥದ ಸಂಪಾದಕ ಮಂಡಳಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು.



ಶ್ರೀಯುತರು ಪರಮಪೂಜ್ಯ ಶ್ರೀಗಳವರನ್ನು ಕುರಿತು ಬರೆದ ಲೇಖನದಲ್ಲಿ ಹೀಗೆ ನುಡಿನಮನಗಳನ್ನು ಸಲ್ಲಿಸಿ ಕೃತಾರ್ಥರಾಗಿದ್ದಾರೆ.

"ಶ್ರೀ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳು, ತ್ರಿವಿಧ ದಾಸೋಹ ಮೂರ್ತಿಗಳು, ಮಹಾಶಿವಯೋಗಿಗಳೂ ಆದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿಲವನ್ನು ಆ ಸಿದ್ಧಲಿಂಗೇಶ್ವರನೇ ಬಲ್ಲನಲ್ಲದೆ ನಮ್ಮಂಥವರು ಬಲ್ಲವೆಂದು ಸೊಲ್ಲಿಸಲಾದೀತೆ! ಮಾತು ಸೋತು ಶರಣಾಗುತ್ತದೆ ಶ್ರೀಗಳವರ ಸನ್ನಿಧಿಯಲ್ಲಿ. ಈ ಸರ್ವಾಂಗಲಿಂಗಿಯಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೇ! ನಿರ್ಮಲ ಕ್ರಿಯಯನ್ನೇ! ಉಜ್ವಲ ವೈರಾಗ್ಯವನ್ನೇ! ಶಮದಮಾದಿ ದೈವೀಸಂಪತ್ತನ್ನೇ! ಬಹುಭಾಷಾ ಪಾರಂಗತೆಯನ್ನೇ! ಸಕಲ ಜೀವರಾಶಿಗಳನ್ನು ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಅಪಾರ ಅನುಕಂಪವನ್ನೇ! ಬೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೇ! ಪಂಡಿತ ಪಾಮರರಿಬ್ಬರನ್ನು ಏಕಪ್ರಕಾರವಾಗಿ ಮೆಚ್ಚಿಸುವ ಮಾತುಗಾರಿಕೆಯನ್ನೇ! ವೈಜ್ಞಾನಿಕ ದೃಷ್ಟಿಯನ್ನೇ! ಆಧ್ಯಾತ್ಮಿಕ ಜ್ಞಾನವನ್ನೇ! ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಗಳನ್ನೇ! ಕವಿ ಕಲಾವಿದರು, ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೇ! ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೇ! ಸಂಘಟನಾ ಶಕ್ತಿಯನ್ನೇ! ಬಹುವಿಷಯ ಪರಿಣತಿಯನ್ನೇ! ಜಗಳವನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೇ! ದಿನ ದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತರು, ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ, ದಾಸೋಹ, ವಿದ್ಯಾರ್ಥಿನಿಲಯ, ಶಾಲಾ ಕಾಲೇಜುಗಳ ಜಟಿಲ ಸಮಸ್ಯೆಗಳು ಎಲ್ಲವನ್ನು ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೇ! ಉದ್ಧರಣೆಗಳನ್ನು ಬರೆಯುವುದರಿಂದ ಸರ್ವೋದ್ಧಾರ ಸಮಗ್ರ ಪ್ರಯೋಜನಗಳವರೆಗೆ ಸರ್ವಕಾರ್ಯಗಳಲ್ಲಿಯೂ ಒಡಮೂಡುವ ಕಾಯಕನಿಷ್ಠೆಯನ್ನೇ! ಗಡಿಯಾರವೂ ನಾಚಿಕೊಳ್ಳುವಂತಹ ಸಮಯ ಪರಿಪಾಲನೆಯನ್ನೇ! ಶರಣ ವಿಜಯ ಜಿತೇಂದ್ರಿಯತ್ವಗಳನ್ನೇ! ಆಲೋಚಿಸಿದನಿತು, ಅಪಾರವಾಗಿ ತೋರುವ ಈ ಆಧ್ಯಾತ್ಮ ಸೂರ್ಯರ ಅಗಾಧವಾದ ಅವರ್ಣೀಯವಾದ ವ್ಯಕ್ತಿತ್ವದ ಎಲ್ಲಾ ಅಂಶಗಳನ್ನು ಗುರುತಿಸಿ, ಅವುಗಳ ಒಟ್ಟು ಬೆಲೆಯನ್ನು ಕಟ್ಟಬಲ್ಲವರಾರು! ಅವರ ಒಂದೊಂದು ನುಡಿಯೂ ಪೋಣಿಸಿದ ಮುತ್ತಿನಹಾರ, ಪರಮಪೂಜ್ಯ ಶ್ರೀಗಳವರ ಘನಶಿವವ್ಯಕ್ತಿತ್ವಕ್ಕೆ ಬರೆದ ಭಾಷ್ಯ.

ಡಾ. ಸಿದ್ಧಯ್ಯ ಪುರಾಣಿಕರು ೭೬ ವರ್ಷಗಳ ಬೇವು ಬೆಲ್ಲವನ್ನು ಸವಿದು, ಎಲ್ಲರೊಂದೊಳಗಾಗಿ ಸಾರ್ಥಕ ಜೀವನ ನಡೆಸಿದರು. ಶರಣರು ಹೇಳಿದಂತೆ ಮರಣವನ್ನು ಪ್ರೀತಿಯಿಂದ ಬರಮಾಡಿಕೊಂಡರು. ಅವರೇ ಒಂದು ಕಡೆ ಹೇಳಿದಂತೆ–

**ಸಾವು ಹಗೆಯಂದೆನೆ ಜೀವನವು ವ್ಯಥೆಯ ಕಥೆ**
**ಸಾವು ಸಖನೆಂದೆನೆ ಬದುಕು ಬಂಗಾರ,**
**ಜೀವ ಸಾವಿನ ಕೊಡುಗೆ, ಸಾವು ಜೀವನದುಡಿಗೆ**
**ಸಾವಿಗೂ ಶರಣೆನ್ನೋ ಮರುಳಸಿದ್ಧ.**

ಮರಣ ಅವರಿಗೆ ಮಹಾನವಮಿಯಾಯಿತು. ಅವರು ಭೌತಿಕವಾಗಿ ಇಂದು ನಮ್ಮ ಮುಂದೆ ಇಲ್ಲದೆ ಹೋದರೂ ಅವರು ಕೊಟ್ಟುಹೋದ ಸಾಹಿತ್ಯದ ಮೂಲಕ ಅಮರರಾಗಿದ್ದಾರೆ.

# ಅವರ ದುಃಖವೆನ್ನ ದುಃಖ ಅವರ ಸುಖವೆನ್ನ ಸುಖ

**ಶಿವನಕೆರೆ ಬಸವಲಿಂಗಪ್ಪ**

*ಕರುಣಾ ಜೀವ ಕಲ್ಯಾಣ ಟ್ರಸ್ಟ್*
*೩ನೆ ಮುಖ್ಯರಸ್ತೆ, ೩ನೆ ಅಡ್ಡರಸ್ತೆ*
*ಎಂ.ಸಿ.ಸಿ. ಬಿ. ಬ್ಲಾಕ್, ದಾವಣಗೆರೆ-೫೭೭೦೦೪*
*೯೮೮೬೭ ೪೫೮೮೦*

ನಮ್ಮ ಪ್ರಸ್ತುತ ಸಮಾಜದಲ್ಲಿರುವ ಭ್ರಷ್ಟಾಚಾರ, ಪರಿಸರ ಮಾಲಿನ್ಯ, ಬಡವರ ಕಷ್ಟಗಳಿಗೆ ಸ್ಪಂದಿಸದ ಸರ್ಕಾರ ಹಾಗೂ ಶ್ರೀಮಂತರನ್ನು ಗಮನಿಸಿದಾಗ ಈ ವಚನ ಬಹು ಪ್ರಸ್ತುತವೆನಿಸುತ್ತದೆ.

ವಚನ ಎಂದರೆ ಬಲ್ಲವರ ಮಾತು. ಬೆಳಕು. ಇಂತಹ ವಚನಗಳಲ್ಲಿ ಅಪಾರ ಶಕ್ತಿ ಇದೆ. ಇವು ಕಾಲ ದೇಶಗಳನ್ನು ಮೀರಿದವು. ಮರಾಠಿಯಲ್ಲಿ ವಚನಗಳಿಗೆ ಅಭಂಗ್ ಎನ್ನುತ್ತಾರೆ. ಅಭಂಗ್ ಎಂದರೆ ಭಂಗ ಇಲ್ಲದಿರುವುದು ಎಂದರ್ಥ. ವಚನಗಳು ಮಾಸುವುದಿಲ್ಲ, ಹೊಲಸಾಗುವುದಿಲ್ಲ. ಒಂದು ಬಿಂದುವಾಗಿ ಹುಟ್ಟುವ ನಾವು ಸಿಂಧುವಾಗಬೇಕು. ಅಂದರೆ ಸಮುದ್ರವಾಗಬೇಕು. ಇದರ ಅರ್ಥ ಮನುಷ್ಯ ತಾನು ತನ್ನ ಜೀವನವನ್ನು ಬೆಳಗಿಕೊಂಡು, ಸಮಾಜವನ್ನು ಬೆಳಗುವಂತವನಾಗಬೇಕು. ಆಗ ನಮ್ಮ ಮಿತಿ, ಬಂಧನ, ದುಃಖ, ಅಹಂಕಾರ ಕಳೆದು, ಪ್ರೀತಿ, ಸತ್ಯ, ಶಾಂತಿ, ಸಾರ್ಥಕಗಳ ಜೀವನ ನಡೆಸಿ ಸಮಾಜಕ್ಕೂ ಮತ್ತು ನಮಗೂ ಕೊಡುಗೆ ಕೊಟ್ಟುಕೊಳ್ಳುತ್ತೇವೆ. ಇದೇ ಆಶಯವನ್ನು ಹೊಂದಿರುವ ಬಸವಣ್ಣನವರ ವಚನವಿದು.

**ನಡೆಯಲರಿಯದೆ, ನುಡಿಯಲರಿಯದೆ,**
**ಲಿಂಗವ ಪೂಜಿಸಿ ಫಲವೇನು? ಫಲವೇನು?**
**ಅವರ ದುಃಖವೆನ್ನ ದುಃಖ, ಅವರ ಸುಖವೆನ್ನಸುಖ**
**ಕೂಡಲಸಂಗನ ಶರಣರ ಮನನೊಂದರೆ ಆನು ಬೆಂದೆನಯ್ಯ.**

ಇದರ ಅರ್ಥ ಅಪಾರ, ಅನಂತ ಮತ್ತು ಅನುಕರಣೀಯ. ಬುದ್ಧ, "ಜೀವನ ಎನ್ನುವುದು ಒಂದು ಕಲೆ. ಆ ಕಲೆಯನ್ನು ಶ್ರದ್ಧೆ, ಶ್ರಮ ಮತ್ತು ವಿವೇಕದಿಂದ ನಮ್ಮದನ್ನಾಗಿಸಿಕೊಳ್ಳಬೇಕು ಯಾರಿಗೆ ನಿದ್ದೆ ಬರುವುದಿಲ್ಲವೋ ಅವರಿಗೆ ರಾತ್ರಿ ಸುದೀರ್ಘ, ಸುಸ್ತಾಗಿರುವವನಿಗೆ ಒಂದು ಮೈಲಿ ನಡೆಯುವುದೂ ಕಷ್ಟ. ಅದರಂತೆ ಯಾರಿಗೆ ಬದುಕುವ ಕಲೆ ಗೊತ್ತಿರುವುದಿಲ್ಲವೋ ಅವರ ಜೀವನ ಸುದೀರ್ಘ ಮತ್ತು ದುಃಖಮಯ" ಎಂದು ತಿಳಿಸಿದ. ನಾವು ಬದುಕುವ ಕಲೆಯನ್ನು ಕಲಿಯಬೇಕು ಇದು ಬಹುಮುಖ್ಯ.



ನೂರುವರ್ಷ ಇರುವ ಜೀವನವನ್ನು ಕಾಯಕ ದಾಸೋಹ ಮಾಡುತ್ತ ಆನಂದ, ಆರೋಗ್ಯ, ಶಾಂತಿ, ಸಾರ್ಥಕ್ಯ, ನೆಮ್ಮದಿ ನನ್ನದು ಮತ್ತು ಸಮಾಜದ್ದು ಸದಾ ಹೆಚ್ಚಿಸುವಂತಿರಬೇಕು. ಸದಾ ವಿನಯ, ಪ್ರೀತಿಯಿಂದ ಆನಂದವಾಗಿರಬೇಕು ಹಾಗೂ ಆನಂದವನ್ನು ವ್ಯಕ್ತಪಡಿಸಬೇಕು. ಇಂದೇ ನನ್ನ ಕೊನೆಯದಿನ ಎನ್ನುವಂತೆ ಕೆಲಸ ಮಾಡಬೇಕು. ಇಡೀ ಸಮಾಜದ ಜವಾಬ್ದಾರಿ ನನ್ನದು ಎನ್ನುವಂತೆ ಕಾಯಕವೆಸಗಬೇಕು. ಪ್ರೇಮವನ್ನು ತಾರತಮ್ಯವಿಲ್ಲದೆ ಸಕಲ ಜೀವರಾಶಿಗೂ ಹಂಚಬೇಕು. ಆನಂದ, ವ್ಯಕ್ತಿ ಮತ್ತು ವಸ್ತುಗಳಲಿಲ್ಲ, ನಮ್ಮ ಹೃದಯದಲ್ಲಿಯೇ ಇದೆ ಎನ್ನುವುದನ್ನು ಮನಗಾಣಬೇಕು. ಬೆಳಿಗ್ಗೆ ಎದ್ದಾಗ ಯಾರಿಗೂ ದೈಹಿಕ, ಮಾನಸಿಕ ಪರಿಪೂರ್ಣತೆ ಇರುವುದಿಲ್ಲ, ಏನಾದರು ಕೊರತೆ ಇರುತ್ತದೆ. ಅದರೆ ಆಧ್ಯಾತ್ಮಿಕ ಚಿಂತನೆ ಮತ್ತು ಅಳವಡಿಕೆಯಲ್ಲಿ ಜೀವನವನ್ನು ಹೆಚ್ಚೆಚ್ಚು ಪರಿಪೂರ್ಣ ಮಾಡಿಕೊಳ್ಳಲು ಸಾಧ್ಯ. ಇದಕ್ಕೆ ನಮ್ಮ ಜೀವನದಲ್ಲಿ ಸತ್ಯ, ಪ್ರೇಮ, ಶಿಸ್ತು, ಬದ್ಧತೆ, ಕರುಣೆ, ಕೊಡುಗೆಗಳು ಇರಬೇಕು. ನಮ್ಮಲ್ಲಿರುವ ದೊಡ್ಡ ಶತೃ ಅಹಂಕಾರ. ಕಾರಗಳಲ್ಲಿ ಕೆಟ್ಟ ಕಾರ ಅಹಂಕಾರ. ಬಸವಣ್ಣನವರು ಅಹಂಕಾರದಿಂದ ಹಾಳಾದವರ ಬಗ್ಗೆ ಒಂದು ವಚನವನ್ನು ಬರೆದಿದ್ದಾರೆ.

**ಆನೆಯನೇರಿಕೊಂಡು ಹೋದಿರೆ ನೀವು,**
**ಕುದುರೆಯನೇರಿಕೊಂಡು ಹೋದಿರೆ ನೀವು,**
**ಕುಂಕುಮ, ಕಸ್ತೂರಿ ಪೂಸಿಕೊಂಡು ಹೋದಿರೆ ನೀವು**
**ಸತ್ಯದ ನಿಲುವನರಿಯದೆ ಹೋದಿರಲ್ಲ,**
**ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲ**
**ಅಹಂಕಾರವೆಂಬ ಸದಮದಗಜವೇರಿ ವಿಧಿಗೆ ಗುರಿಯಾಗಿ ಹೋದಿರಲ್ಲ**
**ನಮ್ಮ ಕೂಡಲಸಂಗನ ಶರಣರ ಅರಿಯದೆ ನರಕಕ್ಕೆ ಭಾಜನರಾದಿರಲ್ಲ.**

ಇಲ್ಲೇ ಸ್ವರ್ಗ, ಇಲ್ಲೇ ನರಕ. ಸದ್ಗುಣಗಳು ಮತ್ತು ನೈತಿಕತೆ ಇಟ್ಟುಕೊಂಡರೆ ನಮ್ಮ ಜೀವನ ಇಲ್ಲೇ, ಈಗಲೇ ಸ್ವರ್ಗವಾಗುತ್ತದೆ. ಆದರೆ ಕೆಟ್ಟ ಕೆಲಸಗಳನ್ನು ಮಾಡಿ, ಅವುಗಳ ನಿವಾರಣೆಗೆ ದೇವರನ್ನು ಹುಡುಕಿಕೊಂಡು ಹೋಗುತ್ತೇವೆ. ಅಂತವರನ್ನು ಗಮನಿಸಿಯೇ ಶಿವರುದ್ರಪ್ಪನವರು "ಎಲ್ಲೋ ಹುಡುಕಿದೆ ಇಲ್ಲದ ದೇವರ, ಕಲ್ಲುಮಣ್ಣುಗಳ ಗುಡಿಯೊಳಗೆ, ಇಲ್ಲೇ ಇರುವ ಪ್ರೀತಿ, ಸ್ನೇಹಗಳ ಗುರುತಿಸದಾದೆವು ನಮ್ಮೊಳಗೆ, ಹತ್ತಿರವಿದ್ದೂ ದೂರ ನಿಲ್ಲುವೆವು ನಮ್ಮೀ ಅಹಮಿನ ಕೋಟೆಯಲಿ" ಎಂದು ಪ್ರೀತಿಯ ಅನುಸರಿಸಲು ವಿವೇಕ ಹೇಳಿದ್ದಾರೆ. ಅಹಮ್ಮಿನ ಕೋಟೆ ಎಂದೂ ಕಟ್ಟುವುದು ಬೇಡ, ಪ್ರೀತಿಯ ಕೋಟೆಯನ್ನು ಕಟ್ಟೋಣ. ಅವರದೆ ಮತ್ತೊಂದು ಮಾತು "ಪ್ರೀತಿ ಇಲ್ಲದ ಮೇಲೆ ಹೂ ಅರಳೀತು ಹೇಗೆ? ಮೋಡ ಕಟ್ಟೀತು ಹೇಗೆ? ಪದಕ್ಕೆ ಪದ ಕೂಡಿ ಅರ್ಥವಾದೀತು ಹೇಗೆ?" ಎನ್ನುತ್ತಾರೆ. ಅದರಂತೆ ಬಸವಣ್ಣನವರು ಒಳ್ಳೆಯ ಜೀವನವೆಂದರೆ "ದಯೆಯೇ ಧರ್ಮದ ಮೂಲ" ಎಂದಿದ್ದಾರೆ. ಸಪ್ತ ಶೀಲಗಳಾದ –

**ಕಳಬೇಡ, ಕೊಲಬೇಡ**
**ಹುಸಿಯ ನುಡಿಯಲುಬೇಡ**

**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ**
**ಇದೇ ಕೂಡಲಸಂಗಮದೇವನೊಲಿಸುವ ಪರಿ"**

ಎಂದು ತಿಳಿಸಿ ಉತ್ತಮ ನಡೆಯ ಜೀವನಕ್ಕೆ ಭದ್ರ ಬುನಾದಿ ಹಾಕಿದ್ದಾರೆ.

**"ಇವ ನಮ್ಮವ, ಇವ ನಮ್ಮವ, ಇವ ನಮ್ಮ ಮನೆಯ ಮಗನೆಂದೆನಿಸಯ್ಯ"** ಮುಂತಾದ ವಚನಗಳನ್ನು ಅನುಸರಿಸಿದರೆ ನಮ್ಮ ಜೀವನ ಪಾವನವಾಗುತ್ತದೆ.

ನುಡಿಯಲರಿಯದೆ ಎಂದರೆ ಮಾತನಾಡಲು ಗೊತ್ತಿಲ್ಲದಿದ್ದರೆ ಜೀವನ ನರಕ. "ಮಾತು ಬಲ್ಲವ ಮಾಣಿಕ್ಯ ತಂದ, ಮಾತು ಬಾರದವ ಜಗಳ ತಂದ"ಎನ್ನುವಂತೆ, ಮಾತು ನಿರ್ಮಾಣ ಮಾಡುತ್ತದೆ ಮತ್ತು ನಿರ್ನಾಮವನ್ನೂ ಮಾಡುತ್ತದೆ. ಮಾತು ಮಾಣಿಕ್ಯ.

**ಮೃದು ವಚನವೇ ಸಕಲ ಜಪಂಗಳಯ್ಯ,**
**ಮೃದು ವಚನವೇ ಸಕಲ ತಪಂಗಳಯ್ಯ,**
**ಸದ್ವಿನಯವೇ ಸದಾಶಿವನೊಲುಮೆಯಯ್ಯ**
**ಅಂತಲ್ಲದೊಲ್ಲನಯ್ಯ ನಮ್ಮ ಕೂಡಲಸಂಗಮದೇವ** ಎನ್ನುವ ವಚನ ಇಲ್ಲಿ ಪ್ರಸ್ತುತ.

ಆದರೆ ಅಸಹನೆ, ಸಿಟ್ಟು, ದ್ವೇಷ ನಮ್ಮೊಳಗೇ ಇದ್ದೇ ಇರುತ್ತವೆ. ಇವನ್ನು ನಿಯಂತ್ರಿಸಿಕೊಂಡು **"ಬೈದವರೆನ್ನ ಬಂಧುಗಳೆಂಬೆ, ಹೊಗಳಿದವರೆನ್ನು ಹೊನ್ನಶೂಲಕ್ಕೇರಿಸಿದರು"** ಎನ್ನುವ ವಚನದಂತೆ ಹೊಗಳಿಕೆಗೆ ಈಡಾಗಬಾರದು. ಇಡೀ ಪ್ರಪಂಚದ ದುಃಖಕ್ಕೆ ಸ್ಪಂದಿಸಬೇಕು. ಸಾಧ್ಯವಾದಷ್ಟು ನೆರವಾಗಬೇಕು.

ನಾವು ಗುಣಸಂಪಾದನೆ ಮಾಡಿ (ಹಣ ಸಂಪಾದನೆಯ ಹಪಾಹಪಿ ಮಿತಿಯಲ್ಲಿಟ್ಟು ಕೊಂಡು) ನೈತಿಕ ಶಕ್ತಿ ಹೆಚ್ಚಿಸಿಕೊಂಡರೆ ಬಾಳು ಪರಮಕಲ್ಯಾಣವಾಗುತ್ತದೆ. ಅದಕ್ಕೆ ಡಿ.ವಿ.ಜಿ ಹೇಳಿರುವ –

**ಸಾರ್ವಭೌಮತೆ ನಾಲ್ಕು ಗುಣಕ್ಕೆ ಗುಣರಾಜ್ಯದಲಿ**
**ಧೈರ್ಯ ಮೊದಲನೆಯದು**
**ಎರಡನೆಯದು ಜ್ಞಾನ**
**ಸರ್ವದಯೆ ನೀತಿಯ ಮೂಲ**
**ನಿರ್ಮಮತ್ವವೇ ಮುಕುಟ ಮಂಕುತಿಮ್ಮ.**

ಈ ಮೇಲಿನ ಕಗ್ಗದಲ್ಲಿನ ಮಾತಿನಂತೆ ಧೈರ್ಯ ಅತ್ಯಂತ ಪ್ರಮುಖ. ನಾವು ಯಾವುದೇ ಸಾಧನೆಗೈಯಬೇಕು ಎಂದರೂ ಧೈರ್ಯವಾಗಿ ಮುನ್ನುಗ್ಗಿದರೆ ಮಾತ್ರ ಸಾಧ್ಯ. ಧೈರ್ಯವಿಲ್ಲದಿದ್ದರೆ ಏನನ್ನೂ ಸಾಧಿಸಲಾಗುವುದಿಲ್ಲ. ಧೈರ್ಯದ ಬಗ್ಗೆ ಪಂಚತಂತ್ರದ ಈ ಕಥೆ ಪ್ರಸ್ತುತ.

ಒಮ್ಮೆ ಅರೆಕುರುಡು ಮುದಿಕುರಿ ಸಂಜೆಯಾದಾಗ ಹುಲ್ಲಿನ ಆಸೆಗೆ ಇತರೆ ಕುರಿಗಳಿಂದ ಬೇರ್ಪಟ್ಟಿತು. ಅದು ತಲೆ ಎತ್ತಿ ನೋಡಿದಾಗ ಒಂದೂ ಕುರಿ ಇರದಿದದ್ದನ್ನು ನೋಡಿ ಗಾಬರಿಯಾದರೂ ತಕ್ಷಣ ಧೈರ್ಯ, ಜಾಣ್ಮೆ ಉಪಯೋಗಿಸಿ ಅಲ್ಲೇ ಹತ್ತಿರವಿದ್ದ ಗುಹೆ ಒಂದರಲ್ಲಿ ಆಶ್ರಯ ಪಡೆಯಲು ನಿರ್ಧರಿಸಿತು. ಅದು ಸಿಂಹದ ಗುಹೆಯಾಗಿದ್ದರಿಂದ



ಕೆಲವು ಗಂಟೆಗಳ ನಂತರ ಸಿಂಹ ಅಲ್ಲಿಗೆ ಬಂದಿತು. ಅದನ್ನು ನೋಡಿದ ಕುರಿ ಗಾಬರಿಯಾದರೂ ಧೈರ್ಯದಿಂದ ಜೋರಾಗಿ ಆರ್ಭಟಿಸಿ, "ನಾನು ಕುರಿ ಕುಲದ ರಾಣಿ, ಅದ್ಭುತ ಪರಾಕ್ರಮಿ. ನನ್ನ ಗುಹೆಯೊಳಗೆ ಬಂದು ನನ್ನೆದುರಿಗೆ ನಿಲ್ಲುವಷ್ಟು ಧೈರ್ಯವೇ?" ಎಂದು ಕೇಳಿತು. ಆಗ ಸಿಂಹ ತನ್ನ ಗುಹೆಗೆ ಬಂದು ಯಾರೂ, ಎಂದೂ ದರ್ಪ ತೋರಿಸಿದ ಘಟನೆಗಳು ಹಿಂದೆಂದೂ ನಡೆಯದಿದ್ದರಿಂದ ಗಾಬರಿಯಾಗಿ ಓಡಿ ಹೋಯಿತು. ಅದನ್ನು ಕಂಡ ನರಿಯಣ್ಣ ಸಿಂಹಕ್ಕೆ ಧೈರ್ಯ ತುಂಬಿ "ನೀನು ಮೋಸ ಹೋಗಿದ್ದೀಯ. ನನ್ನೊಟ್ಟಿಗೆ ಬಾ". ಎಂದು ಪುನಃ ಗುಹೆಗೆ ಕರೆದುಕೊಂಡು ಬಂದಿತು. ಆಗ ಕುರಿ ಪುನಃ ಧೈರ್ಯ ತೆಗೆದುಕೊಂಡು ನರಿಗೆ ಜಬರಿಸಿತು. "ನಾನು ನಿನಗೆ ೧೦ ಸಿಂಹಗಳನ್ನು ಹಿಡಿದುಕೊಂಡು ಬಾ ಎಂದು ಆಜ್ಞೆ ಮಾಡಿರಲಿಲ್ಲವೆ? ನೀನು ಒಂದೇ ಒಂದು ಸಿಂಹವನ್ನು ಹಿಡಿದುಕೊಂಡು ಬಂದು ಸುಳ್ಳನಾಗಿದ್ದೀಯ. ಈ ನಿನ್ನ ಸುಳ್ಳುತನದಿಂದಲೇ ಜನರೆಲ್ಲರೂ ನಿನ್ನನ್ನು ಮೋಸಗಾರ ಎಂದು ಕರೆಯುತ್ತಾರೆ" ಎಂದು ಜರಿಯಿತು. ನರಿಯ ಮೋಸವನ್ನು ಅರಿತಿದ್ದ ಸಿಂಹವು ಕುರಿಯ ಮಾತನ್ನು ನಂಬಿ ನರಿಯನ್ನು ಕೊಂದು ಅಲ್ಲಿಂದ ಪಲಾಯನ ಮಾಡಿತು. ಹೀಗೆ ಧೈರ್ಯ, ಜಾಣ್ಮೆ, ತಾಳ್ಮೆ ಇದರಿಂದ ತನ್ನ ಪ್ರಾಣ ರಕ್ಷಣೆ ಮಾಡಿಕೊಂಡಿತು. ನಮಗೂ ಜೀವನದಲ್ಲಿ ಇಂತಹ ಅನೇಕ ಎಡರು ತೊಡರುಗಳು ಬರುವುದುಂಟು. ಅವುಗಳನ್ನು ಧೈರ್ಯದಿಂದ ನಿಭಾಯಿಸಬೇಕು.

ಇನ್ನು ಎರಡನೆಯದು ಜ್ಞಾನ. ಜ್ಞಾನ ಮಾತ್ರ ಮನುಷ್ಯನನ್ನು ಅಭಿವೃದ್ಧಿಪಡಿಸುತ್ತದೆ. ಅಜ್ಞಾನ ಎಲ್ಲಾ ತೊಂದರೆಗಳನ್ನು ಬೆಳೆಯುವ ಹೊಲವಿದ್ದಂತೆ. ಜ್ಞಾನವಿಲ್ಲದೆ ಉತ್ತಮವಾಗಿ ಕಾರ್ಯವೆಸಗಲಾಗುವುದಿಲ್ಲ.

ಮೂರನೆಯದು ಸರ್ವದಯೆ. ಜಗತ್ತು ಶಾಂತಿಯಿಂದ "ಎಲ್ಲರಿಗಾಗಿ ತಾನು, ತನಗಾಗಿ ಎಲ್ಲರು" ಎನ್ನುವಂತೆ ಬಾಳುವ ಏಕಾತ್ಮತೆಯನ್ನು ನಾವು ಬೆಳೆಸಿಕೊಳ್ಳಬೇಕು. "ಒಬ್ಬನುಣ್ಣುವ ಊಟದಲ್ಲಿ ಸುಖವಿಲ್ಲ, ಸೊಗವಿಲ್ಲ. ಇಬ್ಬರಾಗು ಎಂದನು ಪರಬೊಮ್ಮ. ಹೆಬ್ಬದುಕನು ಒಂಟಿತನದೊಳು ಅದೇನು ನೂಕುವೆಯೋ ತಬ್ಬಿಕೋ ವಿಶ್ವವನು ಮಂಕುತಿಮ್ಮ". ಎನ್ನುವಂತೆ ಬಾಳಬೇಕು.

ಬಸವಣ್ಣನವರು ತಮ್ಮ ಜೀವಿತಾವಧಿಯಲ್ಲಿ ಅಸ್ಪೃಶ್ಯತಾ ನಿವಾರಣೆ, ಅಂತರ್‌ಜಾತಿ ವಿವಾಹ, ಮಹಿಳಾ ಸಮಾನತೆ, ಸಾಮಾನ್ಯರ ಹಕ್ಕಿಗಾಗಿ ಹೋರಾಟ. ಕಾಯಕ ದಾಸೋಹ, ಅಸಂಗ್ರಹ, ಎನಗಿಂತ ಕಿರಿಯರಿಲ್ಲ, ಸರ್ವ ಸಮಾನತೆ, ಸಾಮಾಜಿಕ ನ್ಯಾಯ, ಸಹೋದರತೆ, ಸ್ವಾತಂತ್ರ್ಯ ಇವುಗಳನ್ನು ಸ್ವತಃ ಅಳವಡಿಸಿಕೊಂಡು ಕಲ್ಯಾಣದಲ್ಲೂ ಬಿಜ್ಜಳ ರಾಜನಿಂದ ಹಿಡಿದು ಸಾಮಾನ್ಯ ಜನರು ಅನುಸರಿಸುವಂತೆ ಮಾಡಿ ಕಲ್ಯಾಣದಲ್ಲಿ ವಿಶ್ವದಲ್ಲಿ ಎಂದೆಂದೂ ನಡೆಯದ ಕ್ರಾಂತಿಯನ್ನೇ ಮಾಡಿದರು. ಅವರು ಅಕ್ಷರಶಃ ಇತರರ ದುಃಖವನ್ನು ತಮ್ಮ ದುಃಖ, ಇತರರ ಸುಖವನ್ನು ತಮ್ಮ ಸುಖವೆಂದು ಬಾಳಿ ತಮ್ಮ ಹೃದಯಾಂತರಾಳದಿಂದ ಮೇಲಿನ ವಚನ ಬರೆದಿದ್ದಾರೆ.

ಗಾಂಧೀಜಿಯವರು ಟಾಲ್ ಸ್ಟಾಯ್ ಆಶ್ರಮ ಮಾಡಿದಾಗ, ಸೌತ್ ಆಫ್ರಿಕಾದಲ್ಲಿ ಬ್ರಿಟಿಷರ ವಿರುದ್ಧ ಸಮಾನತೆಗಾಗಿ ಹೋರಾಟ ಮಾಡುವ ಸಂದರ್ಭದಲ್ಲಿ ಹಲವಾರು

ಜನರನ್ನು ಜೈಲಿಗೆ ಹಾಕಿದಾಗ, ಜೈಲಿನಲ್ಲಿದ್ದವರ ಕುಟುಂಬಕ್ಕೆ ತೊಂದರೆಯಾಗಬಾರದೆಂದು ಹೆಣ್ಣುಮಕ್ಕಳ, ಚಿಕ್ಕಮಕ್ಕಳ ಬಟ್ಟೆಗಳನ್ನು ಸ್ವತಃ ಗಾಂಧೀಜಿಯವರೇ ತೊಳೆಯಲು ತೆಗೆದುಕೊಂಡು ಹೋಗುತ್ತಾರೆ. ಇತರರಿಗಾಗಿ ಶ್ರಮಿಸುವ ಒಳ್ಳೆಯ ನಡತೆಯ ಮಹಾನ್ ವ್ಯಕ್ತಿಯಾಗಿದ್ದರು.

ನಿರ್ಮಮತ್ವ ಎಂದರೆ ನಾನು, ನನ್ನದು ಎನ್ನುವುದನ್ನು ಬಿಡುವುದು ಎಂದರ್ಥ. ಇಡೀ ಜಗತ್ತಿನಲ್ಲಿ ನಮಗೆ ಗೊತ್ತಿಲ್ಲದೆ ನಾವು ಒಬ್ಬರಿಗೊಬ್ಬರು ಪರಸ್ಪರ ಅವಲಂಬಿತರು. ಒಬ್ಬರಿಗೊಬ್ಬರು ಶಾಂತಿ, ನೆಮ್ಮದಿಯಿಂದ ಬಾಳಬೇಕೆಂದರೆ ಪರಸ್ಪರ ಹಂಚಿಕೊಂಡು ತಿನ್ನಬೇಕು. ಆಗ ಬಸವಣ್ಣನವರು ಹೇಳಿರುವ "ಅವರ ಸುಖವೆನ್ನಸುಖ, ಅವರ ದುಃಖವೆನ್ನ ದುಃಖ, ಕೂಡಲ ಸಂಗನ ಶರಣರು ಬೆಂದರೆ ಆನು ಬೆಂದೆನಯ್ಯ"ಎನ್ನುವ ಮನಸ್ಸು ನಮ್ಮದಾಗಬೇಕು. ಆಗ ಮಾತ್ರ ಬಸವಣ್ಣನವರ ಈ ವಚನಕ್ಕೆ ಮಹತ್ವ ಕೊಟ್ಟಂತಾಗುತ್ತದೆ. ಯಾವ ಜಾತಿ, ಕುಲ, ಧರ್ಮ ಬೇರೆಯಲ್ಲ "ಮನುಷ್ಯ ಕುಲಂ ತಾನೊಂದೇ ವಲಂ'

ಒಟ್ಟಾರೆಯಾಗಿ ನಮ್ಮ ಮನ, ಮಾತು, ಮಾಟ ಒಂದಾಗಬೇಕು. ನಾವೆಲ್ಲರೂ ಒಂದೇ ಕುಟುಂಬಕ್ಕೆ ಸೇರಿದವರು. ವಸುದೈವ ಕುಟುಂಬಕಂ ಎನ್ನುವಂತೆ ಬಾಳಬೇಕು. ಗಾಂಧೀಜಿಯವರು ಹೇಳಿರುವಂತೆ, ಬಾಳಿರುವಂತೆ "ಲೋಕವೇ ನನ್ನ ಮನೆ, ಇಡೀ ಮನುಕುಲವೇ ನನ್ನ ಕುಟುಂಬ" ಎಂಬ ಮಾತು ಅಳವಡಿಸಿಕೊಳ್ಳಬೇಕು. ಜಾನಪದದಲ್ಲಿ "ಕೇರಿಯೆಲ್ಲ ಬಂಧು, ಬೀದಿಯೆಲ್ಲ ಬಳಗ ಇನ್ನಾರನು ದೂಷಿಸಲಿ" ಎಲ್ಲರೊಡನೆ ಕೂಡಿ ಬಾಳಬೇಕು. ದಾರ್ಶನಿಕ ಜಿದ್ದು ಕೃಷ್ಣಮೂರ್ತಿಯವರು "ನಾವು ಈ ಭೂಮಿಗೆ ಅತಿಥಿಗಳು. ನಾವು ಮೆತ್ತ ಮೆತ್ತಗೆ ನಡೆಯಬೇಕು" ಎಂದಿದ್ದಾರೆ.

●

ನಿತ್ಯ ನಿರಂಜನ ತಾನೆಂದರಿಯದೆ
ತತ್ತ್ವಮಸಿಯೆಂದು ಹೊರಗನೆ ಬಳಸಿ
ಸತ್ತಿತ್ತಲ್ಲಾ ಜಗವೆಲ್ಲಾ ನಾಯಿ ಸಾವ
ತಮ್ಮ ತಾವರಿಯದೆ
ಸತ್ತವರ ಹೆಸರ ಪತ್ರವನೋದಿದಡೆ
ಅದೆತ್ತಣ ಮುಕ್ತಿ
ಗುಹೇಶ್ವರ?







# ಅಕ್ಕನ ವಚನಗಳ ನಿರ್ವಚನ

**ಬಿದರಹಳ್ಳಿ ನರಸಿಂಹಮೂರ್ತಿ**
*'ಅನಿಮಿಷ', ಕ್ರಾಸ್-7, ದುರ್ಗಿಗುಡಿ*
*ಹಂತ 1, ಹೊನ್ನಾಳಿ - 577 217*
*ದಾವಣಗೆರೆ ಜಿಲ್ಲೆ*
*98801 30203*

**ಅತ್ತೆ ಮಾಯೆ, ಮಾವ ಸಂಸಾರಿ.**
**ಮೂವರು ಮೈದುನರು ಹುಲಿಯಂತವದಿರು,**
**ನಾಲ್ವರು ನೆಗೆವೆಣ್ಣು ಕೇಳು ಕೆಳದಿ.**
**ಐವರು ಭಾವದಿರನೊಯ್ವದೈವವಿಲ್ಲ.**
**ಆರು ಪ್ರಜೆಯತ್ತಿಗೆಯರ ಮೀರಲಾರೆನು.**
**ತಾಯೆ, ಹೇಳುವಡೆ ಏಳು ಪ್ರಜೆತೊತ್ತಿರ ಕಾಹು.**
**ಕರ್ಮವೆಂಬ ಗಂಡನ ಬಾಯಟೊಣೆದು,**
**ಹಾದರವನಾಡುವೆನು ಹರನಕೂಡೆ.**
**ಮನವೆಂಬ ಸಖಿಯ ಪ್ರಸಾದದಿಂದ ಅನುಭಾವವ ಕಲಿತೆನು ಶಿವನೊಡನೆ;**
**ಕರಚೆಲುವ ಶ್ರೀಶೈಲ ಚೆನ್ನಮಲ್ಲಿಕಾರ್ಜುನನ**
**ಸಜ್ಜನದಗಂಡನ ಮಾಡಿಕೊಂಬೆ.**

(ವ.೧೩, ಪು.೫, ಶಿವಶರಣೆಯರ ವಚನಸಂಪುಟ, ಸಂ:ಡಾ.ವೀ.ರಾ, ಸ.ವ.ಸಂ.೫, ೧೯೯೩)

ವಚನ ಎಂದರೆ ವಾಕ್ ಅಥವ ಮಾತು ಅಲ್ಲವೆ? ಈ ವಚನದ ಗರತಿಯ ದೂರು ಬಿಚ್ಚಿಟ್ಟ ವಿವರವಾಗದೆ ಮುಚ್ಚಿಟ್ಟ ಮಾತಿನಂತಿದೆ. ಹೀಗೆ ಮುಚ್ಚಿ ಹೇಳುವುದರ ಅಗತ್ಯ ಉದ್ದೇಶ ಪರಿಣಾಮ ಏನು? ಜಡ್ಡುಗಟ್ಟಿದ ಸಾಂಸಾರಿಕ ಸಂಬಂಧಗಳ ಪರೋಕ್ಷ ಪ್ರತಿಮಾತ್ಮಕ ವಿಮರ್ಶೆಯೆ ಈ ವಚನ? ಅರ್ಥಪಲ್ಲಟ ಮಾಡಿ ಕ್ಲುಪ್ತವಾಗಿ ಹೇಳಿ ಗುಟ್ಟನ್ನ ಗುಟ್ಟಾಗಿಯೆ ಇಡೋದು ಇಲ್ಲಿನ ಉದ್ದೇಶವೆ? ತಾತ್ವಿಕ ಪಿಪಾಸುಗಷ್ಟೆ ಒಳತಿರುಳು ತಿಳಿವಂತೆ ಬಿಗಿಮಾತ ಕಟ್ಟೋದೆ? ಅಧ್ಯಾತ್ಮ ಬೋಧೆಗೆ ಜಾಣ ಒಗಟಿನ ಭಾಷಾಶಿಲ್ಪದ ಹೊಳಪಿಟ್ಟು ಕೇಳುಗ\ಓದುಗರ ಸೆಳೆದು ಬುದ್ಧಿಗೆ ಚುರುಕು ಮುಟ್ಟಿಸೋದೆ? ಅಪವ್ಯಾಖ್ಯಾನಕ್ಕೆ ಆಸ್ಪದವೀಯದಂತೆ ಸಂದಿಗ್ಧ ಶಾಬ್ದಿಕ ತಡೆಗೋಡೆ ಒಡ್ಡೋದೆ? ಇರಲಿ, ಇಲ್ಲಿನ ಅರ್ಥಲೋಕ ಭಾವಲೋಕಕ್ಕೆ ಇಣುಕೋಣ. ಹುಟ್ಟು ಮನೆ ಬಿಟ್ಟು ಕೊಟ್ಟ ಮನೆಗೆ ಹೋಗಿ ಗಂಡಗೆ ಹೆಂಡತಿ, ಅತ್ತೆಮಾವಗೆ ಸೊಸೆ, ಮೈದುನರಿಗೆ ಅತ್ತಿಗೆ, ನೆಗೆವೆಣ್ಣುಗಳಿಗೆ ಓರಗಿತ್ತಿ, ಭಾವಂದಿರಿಗೆ ನಾದಿನಿಯಾಗಿ ಮನೆ

ವಾರ್ತೆ ಮಾಡಿ ದಣಿದು ತವರಿಗೆ ಬಂದು ತಾಯಿ/ಗೆಳತಿ ಬಳಿ ತನ್ನ ಗೋಳ್ಗತೆ ತೋಡಿಕೊಳ್ವ ಹೆಣ್ಣ ವಿಲಾಪದಂತೆ ಮೇಲ್ನೋಟಕ್ಕೆ ಕಾಣುವ ಈ ಬೆಡಗಿನ ಛಾಯೆ ಲೇಪಿತ ವಚನ ಭಾರತೀಯ ಆಧ್ಯಾತ್ಮಿಕ ಪರಂಪರೆ ಹಾಗು ಶರಣ ಸಂಸ್ಕೃತಿಯ ತಾತ್ವಿಕ ಗುಪ್ತಕೋಶಕ್ಕೆ ಬೆರಳುಚಾಚುವಂತದು.

ಅತ್ತೆ ಥೇಟ್ ಮಾಯಾವಿನಿ. ಮಾಯೆ ಅಂದರೆ ಇರುವಂತೆ ಭಾಸವಾಗಿ ಸದಾ ಕಾಡುವ, ಆದರೆ ವಾಸ್ತವವಾಗಿ ಇಲ್ಲದಿರುವ ಸಂಗತಿ; ಅರ್ಥಾತ್ ಭಾವದಾಹ ತಣಿಸೊ ಹೆತ್ತ ತಾಯಂತೆ ಕಾಣಿಸುತ್ತಲೆ, ನೀರಾಸೆ ಪೂರೈಸದೆ ನಿರಾಸೆಯುಕ್ಕಿಸಿ ನಿರಸನಗೊಳಿಸೊ ಮರೀಚಿಕಾ ಜಲವಾದವಳು. (ಈ ಘಟವಾಣಿ ಅತ್ತೆಯ ಶಪಿಸುವಂತೆ 'ಎನ್ನಮಾಯದ ಮದವ ಮುರಿಯಯ್ಯಾ' ಎಂದು ಇನ್ನೊಂದೆಡೆ ಗೋಗರೆದಿರುವಳು ಅಕ್ಕ). ಇನ್ನು ಮಾವ ಪಕ್ಕಾ ಸಂಸಾರಿ, ಕಾಮಕ್ರೋಧಾದಿಗಳ ಭಂಡಾರಿ, ಬರಿದೆ ಒಣಸಂಬಂಧ ಜಪಿಸುವ ಅಪ್ಪಟ ಲೌಕಿಕ ಲೆಕ್ಕಾಚಾರಿ. ಹುಲಿಯಂತೆರಗಲು ಕಾದಿರುವ ಮೂವರು ಮೈದುನರೆ ಸತ್ವರಜತಮೋ ಗುಣಗಳೆ? ದೇವ-ಮನುಷ್ಯ-ರಾಕ್ಷಸ ಗಣಗಳೆ? ತ್ರಿಕಾಲ ಪ್ರಜ್ಞೆಯೆ? ಮನ ವಾಕ್ ಕಾಯ ಎಂಬ ತ್ರಿಕರಣವೆ? ಅಥವ ಅವನ್ನ ವಿಶುದ್ಧವಾಗಿರಿಸೊ ಅರಿವಿನ ಪರಿಪಾಲಕ ಗುರು ಲಿಂಗ ಜಂಗಮರೆ? ನಾಲ್ವರು ನೆಗೆವೆಣ್ಣುಗಳು ಪುರುಷನ ಮುಂದೆ ಮಾಯೆಯಾಗಿ ಕಾಡೊ ಚತುರ್ವಿಧ ಪುರುಷಾರ್ಥಗಳೆ? ಅಥವ ಮನಸ್ಸು ಬುದ್ಧಿ ಚಿತ್ತ ಅಹಂಕಾರವೆಂಬ ಸಂಸ್ಕೃತದ ಮನೋವೈಜ್ಞಾನಿಕ ಘಟಕಗಳಾದ ಅಂತಃಕರಣ ಚತುಷ್ಟಯವೆ? ಅಥವ ಕನ್ನಡದ ಕಳ್ಳುಬಳ್ಳಿ ಹೆತ್ತ ಕಕ್ಕುಲತೆ ಮೊಸರು ಕಡೆದು ತೆಗೆದಂತೆ ತನ್ನಂತೆ ಪರರೆಂಬ ಒಗ್ಗಟ್ಟಿನ 'ರುಚಿಯ ಅಂತಃಕರಣದ ಬೆಣ್ಣೆಯೆ? ಐವರು ಭಾವದಿರೆಂದರೆ ವಿಸ್ತೃತ ವಿಶ್ವವನ್ನೆ ನಿಯಂತ್ರಿಸುವಂತೆ ಆವರಿಸಿರುವ ಆಕಾಶ ಗಾಳಿ ಬೆಂಕಿ ನೀರು ಮಣ್ಣು ಪಂಚ ಮಹಾಭೂತಗಳೆ? ಅಥವ ಜೀವಿಗಳ ದೇಹಪಂಜರದಲ್ಲಿ ಬಂಧಿಗಳಾಗಿರುವ ಕಣ್ಣು ಕಿವಿ ಮೂಗು ನಾಲಿಗೆ ಚರ್ಮಪಂಚೇಂದ್ರಿಯಂಗಳೆ? ಅಥವ ಪ್ರಾಣ ಉದಾನ ಸಮಾನ ವ್ಯಾನ ಅಪಾನ ಪಂಚಪ್ರಾಣಗಳೆ? ಇವುಗಳ ನಿರಂತರ ದಾಳಿಯಿಂದ ರಕ್ಷಿಸಬಲ್ಲ ದೈವವೆ ಎಲ್ಲೂ ಕಾಣುತ್ತಿಲ್ಲವಲ್ಲ? ಆರು ಪ್ರಜೆಯತ್ತಿಗೆಯರು ಹಸಿವು ನೀರಡಿಕೆ ಶೋಕ ಮೋಹ ಮುಪ್ಪು ಮರಣ ಎಂಬ ಷಡೂರ್ಮಿಗಳೆ? ಅಥವ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ ಎಂಬ ಅರಿಷಡ್ವರ್ಗಗಳೆ? ಅಯ್ಯೊ ಇವರನ್ನೆಲ್ಲ ಮೀರಿನಡೆವ ಸಾಮರ್ಥ್ಯ ತನ್ನಲ್ಲಿಲ್ಲವಲ್ಲ ಎಂದು ಕೊರಗುತ್ತಿರುವಳೆ ಈ ಗರತಿ? ಅಥವ ಸನ್ಮಾರ್ಗಕ್ಕೆ ಹಚ್ಚಿ ಲಿಂಗಾಂಗ ಸಾಮರಸ್ಯ ಸಿದ್ಧಿಗೆ ಕರೆದೊಯ್ವ ಷಟ್‌ಸ್ಥಲಗಳ ಪ್ರತಿರೂಪಗಳೆ ಇವರು? ಹಾಗಿದ್ದರಿವರ ಮೀರಿ ನಡೆದೇನು ಹೇಗೆ ಎಂಬ ಅಂಜಿಕೆಯೆ, ಆತಂಕವೆ? ಜೊತೆಗಿಷ್ಟೆ ಸಾಲದೆಂಬಂತೆ ಏಳು ಪ್ರಜೆ ತೊತ್ತಿರು = ಕಣ್ಣಲ್ಲೆಣ್ಣೆ ಬಿಟ್ಟುಕೊಂಡು ಕಾಯುವ ನೆಪದಲ್ಲಿ ಕಾಡಿಸಿ ಬಿಸಿಮುಟ್ಟಿಸುವ ಹಾದರ ಹೆಂಡ ಜೂಜು ಬೇಟೆ ದುಂದು ಕ್ರೋಧ ಕ್ರೌರ್ಯ ಎಂಬ ಸಪ್ತವ್ಯಸನಗಳೆ? ಅಥವ ಗರ್ವ ದುರಾಸೆ ಕೋಪ ಮತ್ಸರ ಕಾಮ ಹೊಟ್ಟೆಬಾಕತನ ಸೋಮಾರಿತನ ಎಂಬ ಸಪ್ತಪಾಪಗಳೆ? ಅಧ್ಯಾತ್ಮ, ಅನುಭಾವ ಪ್ರತಿಯೊಬ್ಬರೊಳಗು ಪ್ರತ್ಯೇಕವಾಗಿಯೆ ಸಂಭವಿಸುವ ಖಾಸಗಿ ಒಳಾನುಭವವಾದ್ದರಿಂದ ಮೇಲಿನ ಪ್ರಶ್ನೆಗಳಿಗೆಲ್ಲ ನಮ ನಮಗೆ ಅನುಗುಣವಾದ



ಉತ್ತರ ನಾವೇ ಆಯ್ದುಕೊಳ್ಳಬೇಕು. ಕರ್ಮವೆಂಬುದು ಈ ಜನ್ಮಕ್ಕಂಟಿ ಜೀವಕ್ಕೆ ಗಂಟುಬಿದ್ದ ಅಪರಿಹಾರ್ಯ ಸಂಚಿತ\ಪ್ರಾರಬ್ಧ\ಆಗಾಮಿ ಕರ್ಮದ ಹೊರೆಯೆ? ಅಥವ ಇದೇ ಜನ್ಮದಲ್ಲಿ 'ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹುವ' ಸ್ಮೃತಿತಂತ್ರವೆ? ಇದರ ಸಹವಾಸದ ಪರಿಣಾಮವೆಂದರೆ ಬರಿ ಆತ್ಮಾವಹೇಳನ ಅತೃಪ್ತಿ ಅಷ್ಟೆ ತಾನೆ? ಅಥವ ಇದು ಕರ್ಮಯೋಗ\ಕಾಯಕವೆ ಕೈಲಾಸ ಪರಿಕಲ್ಪನೆ ಮೂಲಕ ಸಾರ್ಥಕ್ಯ ಭಾವ ಉದ್ದೀಪಿಸುವ ಇತ್ಯಾತ್ಮಕ ಮೌಲ್ಯವೆ? ಇದೆಲ್ಲವನ್ನೂ ಮೀರಿ ಶಾಶ್ವತವಾದ ಸುಖಪಡುವುದು ಹೇಗೆ? ಭೌತಿಕಲೋಕದ ವ್ಯವಹಾರಿಣಿ ಕುಂಟಣಿ ದೇಹವಿಕ್ರಯಕ್ಕೆ ಕುಮ್ಮಕ್ಕಿಟ್ಟು ಹಾದರಿಗರ ಹುಡುಕಿ ತರುವ ಊಳಿಗದವಳಷ್ಟೆ. ಆದರೆ ಮನವೆಂಬ ಸಖಿ ಅರ್ಥಾತ್ ಆತ್ಮಸಖಿ ಅನುಭಾವಿಕ ಅಂತರ್ಲೋಕದ ಭವತಾರಿಣಿ. ಈ ಒಳಸಖಿಯ ಸುಖದಾಯಿ ವರಪ್ರಸಾದವೆ ಜನ್ಮಜಾತ ನೈಸರ್ಗಿಕ ಹಕ್ಕಿನ ನಿರಂಕುಶ ಪ್ರೀತಿ= ಸ್ವಚ್ಛಂದ ಭಕ್ತಿ= ಸ್ವಾನುಭಾವಿ ಆತ್ಮವಿದ್ಯೆ. ಅದೆ ನಿಜವಾದ ಶಿವನೊಡನಾಟದ ದಿವ್ಯಾನುಭವ. ಅದು ಬರಿ ಶಬ್ದದ ಲಜ್ಜೆಯನ್ನಷ್ಟೆ ಅಲ್ಲ, ಸಾಂಸಾರಿಕ ಲಜ್ಜೆ, ಸಾಮಾಜಿಕ ಲಜ್ಜೆಯೂ ಸೇರಿ ಮುಪ್ಪುರಿಗೊಂಡಂತೆ ಲೋಕದ ಲಜ್ಜೆ ಹಂಗನ್ನೆ ಹರಿದು ಚೂರುಚೂರಾಗಿ ಬಿಸಾಡುವಂಥದು. ಹಳೆಗಂಡನ 'ಬಾಯಟೊಣೆದು' (ಬಾಯಿಬಡಿದು\ತೆಪ್ಪಗಾಗಿಸಿ) ಅಂದರೆ ಹಿಂದಣ ಜನ್ಮದ ಕರ್ಮದ ಹೊರೆ ಅಥವ ಇದೇ ಜನ್ಮದ ಈ ಹಿಂದಿನ ಪಾಪಕರ್ಮದ ಹೊರೆಯನ್ನೆಲ್ಲ ಸುಟ್ಟುಹಾಕಿ ಇಷ್ಟದೈವ 'ಕರಚೆಲುವ ಶ್ರೀಶೈಲ ಚೆನ್ನಮಲ್ಲಿಕಾರ್ಜುನ'ನೆಂಬ 'ಸಜ್ಜನದ ಗಂಡನ ಮಾಡಿಕೊಂಬೆ' ಎಂಬ ಸ್ವಯಂವರ ಸ್ವಾತಂತ್ರ್ಯ ಹುಟ್ಟಾ ಅನುಭಾವಿಯಕ್ಕನ ಮೀಸಲಹಕ್ಕಲ್ಲವೆ? 'ಹಾದರವ ನಾಡುವೆನು ಹರನಕೂಡೆ' ಸಾಲು 'ಒಳಗಣ ಗಂಡನಯ್ಯಾ ಹೊರಗಣ ಮಿಂಡನಯ್ಯಾ' ವಚನವ ಮೆಲುಕು ಹಾಕುವಂತಿದೆ. ಆ ಸಾಂಕೇತಿಕ ವಚನದ ಸ್ಪಷ್ಟೀಕರಣ, ಅರ್ಥವಿಸ್ತಾರ, ಭಾವ ವಿಕಸನ ಈ ವಚನದಲ್ಲಡಗಿದೆ ಎನಿಸತ್ತೆ. ಅದೆ ಸೋಸಿದ ಸದ್ಭಕ್ತಿ, ಸ್ವಚ್ಛಂದಾನುಭಾವದ ಮರುಕಳಿಕೆಯಂತಿದೆ ಇದುಕೂಡ. ಲೋಕ ವ್ಯತಿರಿಕ್ತ ವಿಶ್ವವಿಲಕ್ಷಣ ಸ್ವಾನುಭಾವಿಗಳ ಸೌಂದರ್ಯಲಹರಿ ಅದಿನ್ನೆಷ್ಟು ವೈಶಿಷ್ಟ್ಯಪೂರ್ಣ ವೈಚಿತ್ರ್ಯಭರಿತವಲ್ಲವೆ? ಬಹುಶಃ ಕಾಂಟಿನೆಂಟಲ್ ಡ್ರಿಫ್ಟ್‌ಗಿಂತಲು ಹಿಂದಣ ಯುಗದಲ್ಲಿದ್ದ ಗೊಂಡ್ವಾನಾ ಪ್ರದೇಶದ ಹೃತ್ಕೇಂದ್ರದಂತಿದ್ದಿರಬಹುದಾದ ಈ ನಮ್ಮ ಕರುನಾಡಲ್ಲಿ ಜನ್ಮತಳೆದ ಮಹಾದೇವಿಯಕ್ಕ ಅಂಥ ವಿಶ್ವಪೂಜಕಳಾದ ವಿಭೂತಿ, ದೇಶ ಕಾಲಾತೀತಳಾದ ಸ್ವಾನುಭಾವಿ ಎಂಬುದೆ ಕನ್ನಡ ಸಂಸ್ಕೃತಿಯ ಅತಿ ದೊಡ್ಡ ಹೆಮ್ಮೆಯೆನಿಸಲ್ಲವೆ?

●

ನಿದ್ರೆಯಿದ್ದೆಡೆಯಲ್ಲಿ ಬುದ್ಧಿಂಸಿಂಬುದಿಲ್ಲ
ನೋಡಾ
ಕಾಯುವೊಂದೆಸೆ ಜೀವವೊಂದೆಸೆ
ಗುಹೇಶ್ವರಲಿಂಗ ತಾನೊಂದೆಸೆ



## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೩೩ರ ಸರಿಯುತ್ತರಗಳು

೧. (ಇ) ಅಭಿನವ ಮಲ್ಲಿಕಾರ್ಜುನ ೨. (ಅ) ರಾಯಸದ ಮಂಚಣ್ಣ

೩. (ಈ) ಚರ್ಮದ ಪಾದುಕೆ ೪. (ಅ) ವೇದಗಳ ಕರ್ಮಕಾಂಡವನ್ನು ನಂಬುವಾತ

೫. (ಆ) ಅಂಗಸೋಂಕಿನ ಲಿಂಗತಂದೆ

'ಮಹಾಮನೆ'ಯ "ವಚನ ರಸಪ್ರಶ್ನೆ-೩೩"ರಲ್ಲಿ ೫ನೆ ಪ್ರಶ್ನೆಯ ಉತ್ತರವು ಕಣ್ತಪ್ಪಿನಿಂದ ತಪ್ಪಾಗಿದ್ದು, ಅದರ ಸರಿಯುತ್ತರ **ಸುಂಕದ ಬಂಕಣ್ಣ** ಪ್ರಮಾದಕ್ಕಾಗಿ ವಿಷಾದಿಸುತ್ತೇವೆ. **ಸಂ.**

ಸರಿ ಉತ್ತರವನ್ನು ಒಬ್ಬರು ಕಳಿಸಿರುತ್ತಾರೆ. ಅವರಿಗೆ ಈ ಸಂಚಿಕೆಯ ಬಹುಮಾನವನ್ನು ಅಂಚೆ ಮೂಲಕ ಕಳಿಸಲಾಗಿದೆ.

**೧. ಟಿ.ಕೆ. ಗಂಗಾಧರ ಪತ್ತಾರ, ಬಳ್ಳಾರಿ**

### ವಚನ ರಸಪ್ರಶ್ನೆ ~ ೩೪ರ ಪ್ರಶ್ನೆಗಳು

**೧.'ಸ್ವತಂತ್ರ-ಪರತಂತ್ರಕ್ಕೆ ಆವುದು ಚಿಹ್ನ ನೋಡಾ'- ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?**

(ಅ) ಚನ್ನಬಸವಣ್ಣ (ಆ) ಅಕ್ಕಮಹಾದೇವಿ

(ಇ) ಅಲ್ಲಮ (ಈ) ಅವಸರದ ರೇಕಣ್ಣ

**೨. 'ಹಪ್ಪು' ಪದದ ಅರ್ಥ:**

(ಅ) ಮಾಂಸದ ಚೂರು (ಆ) ಮೊಸರು

(ಇ) ಹಂಚು (ಈ) ಅಪ್ಪುಗೆ

**೩. 'ಧರ್ಮೇಶ್ವರ ಲಿಂಗ' ಎಂಬುದು ಯಾರ ಅಂಕಿತ ನಾಮ:**

(ಅ) ಹಡಪದ ಅಪ್ಪಣ್ಣ (ಆ) ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ

(ಇ) ಹೊಡೆಹುಲ್ಲ ಬಂಕಣ್ಣ (ಈ) ಹೆಂಡದ ಮಾರಯ್ಯ

**೪. ಬಾಲ ಬೊಮ್ಮಣ್ಣನ ಅಂಕಿತ ನಾಮ ಯಾವುದು?**

(ಅ) ಬ್ರಹ್ಮೇಶ್ವರ ಲಿಂಗ (ಆ) ವೀರಶೂರ ರಾಮೇಶ್ವರಲಿಂಗ

(ಇ) ಅರ್ಕೇಶ್ವರ ಲಿಂಗ (ಈ) ಚಂದೇಶ್ವರ ಲಿಂಗ

**೫. 'ಸೌಥ್ಯ' ಎನ್ನುವ ಪದದ ಅರ್ಥ:**

(ಅ) ನಿಂದನೆ (ಆ) ಗೇಲಿ

(ಇ) ಹೊಗಳಿಕೆ (ಈ) ಪುರೋಹಿತ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**



# ಅಗಣಿತ

**ಡಾ. ಅಮರೇಶ ನುಗಡೋಣಿ**

*'ಸೂರು', ಎಂ.ಪಿ. ಪ್ರಕಾಶ ನಗರ,*
*ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,*
*ಹೊಸಪೇಟೆ - ೫೮೩ ೨೦೧*
*ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯*

**ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ**
**ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ**
**ವ್ರತಹೀನನನರಿದು ಬೆರೆದಡೆ**
**ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ**
**ಒಲ್ಲೆನೊಲ್ಲೆ ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರ**

**- ಸೂಳೆ ಸಂಕವ್ವ**

ಸೂಳೆ ಸಂಕವ್ವೆಯ ವಚನವಿದು. ಸಿಕ್ಕಿರುವುದು ಇದೊಂದೇ ವಚನ. ಇದು ಕುತೂಹಲದ ಸಂಗತಿ. ಈ ವಚನಕಾರ್ತಿಯ ವಚನಗಳು ಪ್ರತಿರೋಧದಿಂದ ಕೂಡಿವೆ ಅನ್ನಿಸುತ್ತಿವೆ. ಆದರೆ ಲಭ್ಯವಿಲ್ಲ. ಮಡಿವಂತ ಸಂಕಲನಕಾರರು ಮೂಲೆಗೆಸೆದಿರಬೇಕು. ಇದು ಊಹೆಯಷ್ಟೆ. ವಚನಕಾರರು ಅದರಲ್ಲೂ ವಚನಕಾರ್ತಿಯರು ವ್ರತದ ಬಗ್ಗೆ, ನೇಮದ ಬಗ್ಗೆ ಪ್ರಜ್ಞಾಪೂರ್ವಕವಾಗಿ ಮಾತಾಡಿದ್ದಾರೆ. ಶಿವದೀಕ್ಷೆ, ಲಿಂಗದೀಕ್ಷೆ ಪಡೆದ ಸಾಮಾನ್ಯರಿಗೆ ಅನೇಕ ನೇಮಗಳನ್ನು ವಿಧಿಸಿರಬೇಕು. ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಎಂಬ ಮೂರು ತತ್ವಗಳ ಆಚರಣೆಯಲ್ಲಿ ಶ್ರದ್ಧೆ, ನಿಷ್ಠೆಯಿಂದ ಸಾಧನೆ ಮಾಡಬೇಕೆಂಬ ಕಟ್ಟುನಿಟ್ಟಿನ ಕ್ರಮ ವಿಧಿಸಲಾಗುತ್ತಿತ್ತು ಎಂಬುದು ವಚನಗಳಿಂದ ತಿಳಿಯುತ್ತದೆ. ಭಕ್ತನ ಹಾದಿಯೇ ಕಠಿಣವಾದದ್ದು. ಅದು ಹೋಗುತ್ತ ಕೊಯ್ವ, ಬರುತ್ತ ಕೊಯ್ವಂಥದ್ದು. ವಚನ ಚಳುವಳಿಯ ವ್ಯಾಪ್ತಿಯಲ್ಲಿ ರೂಪುಗೊಳ್ಳುವ ಶರಣ, ಶರಣೆಯರದ್ದೇ ಕಠಿಣ ಪರಿಶ್ರಮ ಪಡಬೇಕಾಗುತ್ತಿತ್ತು. ಮೂಲ ಸಂಸ್ಕಾರ ಬಿಟ್ಟು, ಹೊಸ ಬಾಳ್ವೆಗೆ ಬರುವುದು ಸಾಮಾನ್ಯರಿಗೆ ಒಂದು ಕಡೆ ಸಂಭ್ರಮ. ಜತೆಗೆ ಭಯವೂ ಇರುತ್ತಿತ್ತು. ಛಲವೂ ಇರುತ್ತಿತ್ತು. ಈ ಹಾದಿಯಲ್ಲಿ ಗೆಲ್ಲುವವರೆಷ್ಟೊ, ಸೋಲುವವರೆಷ್ಟೊ. ಸಂಘರ್ಷಗಳು ಉಂಟಾಗಿರುತ್ತವೆ. ಆದರೂ ವಚನ ಚಳುವಳಿ ಸಾಧಿಸಿದ್ದು ಕಡಿಮೆಯೇನಲ್ಲ.

ಸೂಳೆ ಎನ್ನುವ ವೃತ್ತಿಯನ್ನು ಒಂದು ಕಾಯಕವೆಂದು ನಿರ್ಣಯಿಸಿ, ಅದಕ್ಕೂ ಮಾನ್ಯತೆ ಮಾತ್ರವಲ್ಲ ಗೌರವವನ್ನು ಕೊಡಲಾಯಿತು ಎಂದು ತಿಳಿಯುತ್ತದೆ. ವಚನಗಳಲ್ಲಿ 'ಸೂಳೆ', 'ವೇಶ್ಯೆ' ಎನ್ನುವ ಪದ ಬಳಕೆಯಾಗಿದೆ. ಅದೂ ಕೆಟ್ಟದ್ದಕ್ಕೆ ಉದಾಹರಣೆ ಯಾಗಿಯೇ ಬಳಕೆಯಾಗಿದೆ. ಆದರೆ ವೇಶ್ಯಾವೃತ್ತಿಯನ್ನು ಎಲ್ಲ ಕಾಯಕಗಳಂತೆ ಅದೂ ಒಂದು ಎಂಬುದನ್ನು ತಿಳಿದು ಜಾರಿಗೆ ತಂದದ್ದು ಸಾಧನೆಯೇ ಸರಿ. ಜಾತಿನಾಶ ಹೇಗೆ ಸಾಧ್ಯವಾಗಲಿಲ್ಲವೋ

ಹಾಗೆಯೇ ಈ ವೃತ್ತಿಯೂ ನಾಶವಾಗಲು ಸಾಧ್ಯವಿಲ್ಲ ಅಥವಾ ಇಚ್ಛಾಶಕ್ತಿಯ ಕೊರತೆಯೂ ಇರಬೇಕು. ರಾಜಪ್ರಭುತ್ವ, ಯುದ್ಧ, ಸೈನಿಕರು, ವಲಸಿಗರು, ಅನೈತಿಕರು ಅಸ್ತಿತ್ವದಲ್ಲಿ ಇರುವತನಕ ಈ ವೃತ್ತಿ ಇರುತ್ತದೆ.

ಸಂಕವ್ವನ ವಚನದಲ್ಲಿ, ಒಬ್ಬ ವೇಶ್ಯೆ ಒಬ್ಬನ ಸಂಗ ಮಾಡಲು ಒಪ್ಪಿಕೊಂಡು ಹಣ ಪಡೆದರೆ ಮುಗಿಯಿತು. ಮತ್ತೊಬ್ಬರಿಂದ ಒತ್ತೆ(ಹಣ)ಯನ್ನು ಪಡೆಯಬಾರದು ಎಂಬ ನಿಯಮವನ್ನು ವಿಧಿಸಲಾಗಿರಬೇಕು. ಮತ್ತೊಬ್ಬರಿಂದ ಹಣ ಪಡೆದರೆ ಕಠಿಣ ಶಿಕ್ಷೆಗೆ ಆ ವೇಶ್ಯೆ ಗುರಿಯಾಗಬೇಕು. ಈ ಕಠಿಣ ಶಿಕ್ಷೆಯ ಬಗ್ಗೆ ವೇಶ್ಯೆಗೆ ಬಲವಾದ ಭಯವಿದ್ದುದು ಓದುಗನ ಅರಿವಿಗೆ ಬರುತ್ತದೆ. 'ಬೆತ್ತಲೆ ನಿಲ್ಲಿಸಿ ಕೊಲ್ಲುವರಯ್ಯ' ಎಂಬ ನುಡಿ ಚಿಂತನೆಗೆ ಗುರಿ ಮಾಡುತ್ತದೆ. ಯಾರು ಬೆತ್ತಲೆ ನಿಲ್ಲಿಸಿ ಕೊಲ್ಲುತ್ತಿದ್ದರು? ಈ ನಿಯಮ ವಿಧಿಸಿದ್ದು ಯಾವ ವ್ಯವಸ್ಥೆ? ಪುರುಷ ವ್ಯವಸ್ಥೆ ಇರಬೇಕು. ಇದಕ್ಕೆ ಅಧಿಕಾರ ಕೊಟ್ಟ ವ್ಯವಸ್ಥೆ ಯಾವುದು? 'ನಿಲ್ಲಿಸಿ ಕೊಲ್ಲಲು' ರಾಜಪ್ರಭುತ್ವ ಅಧಿಕಾರ ನೀಡಿತ್ತೆ? ಇಲ್ಲ ಎನ್ನಿಸುತ್ತದೆ. ಯಾಕೆಂದರೆ 'ವ್ರತಹೀನನನರಿದು ಬೆರೆದಡೆ' ಎಂಬ ಮಾತು ಬರುತ್ತದೆ. ವ್ರತಹೀನರು ಎಂದರೆ ಯಾರು? ವ್ರತನಿಷ್ಠರು ಎಂದರೆ ಯಾರು? ವಚನ ಚಳುವಳಿಯ ವ್ಯಾಪ್ತಿಯಿಂದ ಹೊರಗಿರುವವರನ್ನು ವ್ರತಹೀನರು ಎಂದು ಭಾವಿಸಬೇಕೆ? ಈ ಚಳುವಳಿಯ ಒಳಗಿರುವವರನ್ನು ವ್ರತನಿಷ್ಠರು ಎಂದು ತಿಳಿಯಬೇಕೆ? ಒಂದು ವೇಳೆ ವಚನ ಚಳುವಳಿಯ ಒಳಗಿರುವವರು ವ್ರತನಿಷ್ಠರಾಗಿದ್ದು, ಅವರು ವೇಶ್ಯೆಯ ಸಂಗಕ್ಕೆ ಹೋಗಲಾರರು. ವಚನ ಚಳುವಳಿಯ ಹೊರಗಿರುವವರಿಗೆ ವ್ರತವಾಗಲಿ, ನೈತಿಕ ಪ್ರಶ್ನೆಯಾಗಲಿ ಇರಲಿಲ್ಲವೆಂದರೆ ಅಂಥವರನ್ನು ವ್ರತಹೀನರು ಎಂದರಿದು ಕೂಡಿದರೆ ಶಿಕ್ಷೆಯಿತ್ತೆ? ಹಾಗಾದರೆ ಯಾರಿಂದ ಶಿಕ್ಷೆಯಿತ್ತು? ಈ ವಚನ ಇಂತಹ ಅನೇಕ ಪ್ರಶ್ನೆಗಳನ್ನು ಓದುಗನಲ್ಲಿ ಹುಟ್ಟು ಹಾಕುತ್ತದೆ.

ವಚನ ಚಳುವಳಿಯ ಒಳಗಿರುವವರು, ವ್ರತನಿಷ್ಠರಾಗಿದ್ದರೆ ಇಂಥವರ ಜತೆ ಮಾತ್ರ ಬೆರೆಯುವ ಅವಕಾಶವಿತ್ತೇ? ಇಂಥವರು ವೇಶ್ಯಾ ಸಂಗ ಮಾಡುವುದು ಉಚಿತವೇ? ಬಸವಣ್ಣನವರ ಒಂದು ವಚನದಲ್ಲಿ 'ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು' ಎಂಬ ಮಾತು ಬರುತ್ತದೆ. ಕಡಬಡ್ಡಿಯನ್ನು ಶಿವಶರಣರಿಗೆ ಮಾತ್ರ ಕೊಡಬೇಕು. 'ಬಂದರೊಂದು ಲೇಸು, ಬಾರದಿದ್ದರೆರಡು ಲೇಸು' ಎಂದು ವಚನದಲ್ಲಿದೆ. ಶರಣರು ಶರಣರಿಗೆ ಮಾತ್ರ ಬಡ್ಡಿಗೆ ಹಣ ಕೊಡಬೇಕು ಎಂಬ ನಿಯಮ ವಿಧಿಸಿರಬೇಕು. ವಚನ ಚಳುವಳಿ ಸಾಧಿಸಿರುವುದನ್ನು ಗಮನಿಸಿದರೆ, ಈ ವಚನ ವಿರೋಧಾಭಾಸದಂತೆ ಕಾಣುತ್ತದೆ. ಶರಣ ಕಾಯಕ ಜೀವಿಗಳು ತಮ್ಮ ಕಡ್ಡಾಯ ಕಾಯಕದಿಂದ ಫಲ ಪಡೆದು ದಾಸೋಹವನ್ನೂ ಮಾಡುವವರಾಗಿದ್ದರು. 'ಬೇಡುವವರಿಲ್ಲದೆ ಬಡವ'ರಾದವರು ಶರಣರು. ಹೀಗಿರುವಾಗ ಶಿವನ ಭಕ್ತರಿಗೆ ಕಡಬಡ್ಡಿಯ ಅಗತ್ಯವಿತ್ತೆ?

ಮೇಲಿನ ಸಂಕವ್ವನ ವಚನದ ವ್ಯಾಪ್ತಿಯಿಂದ ಹೊರಗೆ ಬಂದು ಆಲೋಚಿಸುವ ಅಗತ್ಯವಿದೆ. ಹಳ್ಳಿಗಳಲ್ಲಿ ವೇಶ್ಯವೃತ್ತಿಗೆ ಬಿಡುವ ಪದ್ಧತಿಯಿದೆ. ಅದು ದಲಿತರಲ್ಲಿ ಹೆಚ್ಚಾಗಿದೆ. ದಂಪತಿಗಳಿಗೆ ಹೆಣ್ಣು ಮಕ್ಕಳು ಮಾತ್ರವಿದ್ದು ಗಂಡುಮಕ್ಕಳಿಲ್ಲದಿದ್ದರೆ, ಅಂತಹ ದಲಿತ ಕುಟುಂಬಗಳಲ್ಲಿ ಹಿರಿಯ ಹೆಣ್ಣುಮಗಳನ್ನು ದೇವರ ಹೆಸರಿನಲ್ಲಿ ವೇಶ್ಯೆಯನ್ನಾಗಿ ಮಾಡಿಕೊಂಡು ದಲಿತ ಮಗನೆಂದು ತಿಳಿದುಕೊಳ್ಳುತ್ತಾರೆ. ಈ ವೇಶ್ಯೆಯಾದ ಹೆಣ್ಣುಮಗಳು ತಂದೆ – ತಾಯಿಗಳ ಮುಪ್ಪಿನ ವಯಸ್ಸಿನಲ್ಲಿ ತುತ್ತು ನೀಡಿ ನೋಡಿಕೊಳ್ಳಬೇಕು. ಹಿರಿಯನೋ,



ಕಿರಿಯನೋ ಮಗನಿದ್ದರೆ ನೋಡಿಕೊಳ್ಳುವಂತೆ. ಇಂತಹ ವೇಶ್ಯೆಯನ್ನು, ಯಾರೋ ಒಬ್ಬರು ಮಾತ್ರ ಪಡೆದು ಒಪ್ಪಿಗೆಯನ್ನು ಮಾಡಿಕೊಂಡರೆ, ಅಂಥವರ ಜತೆಯಲ್ಲೇ ಜೀವನ ಮಾಡಬೇಕು. ಅದು ಬಿಟ್ಟು ವೇಶ್ಯೆಯೆಂದು ತಿಳಿದುಕೊಂಡು ಒಪ್ಪಂದ ಮುರಿದು ನಡುನಡುವೆ ಇನ್ನೊಬ್ಬರನ್ನು ಬೆರೆಯುವಂತಿಲ್ಲ. ಇದು ಇಂತಹ ವೇಶ್ಯೆಯ ನಿಷ್ಠೆ. ಇಂಥವರಿಗೆ ಸಮಾಜದಲ್ಲಿ ಗೌರವವಿತ್ತು. ಆಕಸ್ಮಾತ್ ಒಪ್ಪಂದ ಮೀರಿ ಇನ್ನೊಬ್ಬನನ್ನು ಬೆರೆದರೆ ಶಿಕ್ಷೆಯಿತ್ತು ಎಂದು ಕಾಣುತ್ತದೆ. ಇಲ್ಲಿ ಯೋಚಿಸಬೇಕಾದದ್ದು ಏನೆಂದರೆ, ಮಹಿಳೆಯೂ ಆಗಿ, ವೇಶ್ಯೆಯೂ ಆಗಿ ಈಕೆಗೆ ಸ್ವಾತಂತ್ರ್ಯವಿಲ್ಲ ಎಂಬುದು ತಿಳಿಯುತ್ತದೆ.

ವ್ರತಹೀನನ ಬೆರೆತರೆ 'ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ' 'ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ' ಎಂಬ ಮಾತಿನಲ್ಲಿ ಸಂಕವ್ವನ ಎದೆಯಾಳದ ನೋವು ಕೇಳಿಸುತ್ತದೆ. ಇದಕ್ಕೆ ಕಾರಣವಾದ ವ್ಯವಸ್ಥೆಗಳನ್ನು ಶೋಧಿಸಿ ವಿಮರ್ಶಿಸಬೇಕಾಗಿದೆ. ●

## ಸಾಮಾನ್ಯ ಪ್ರಜ್ಞೆ

ಒಬ್ಬ ದೊರೆ ತನ್ನ ರಾಜಧಾನಿ ನಗರದಲ್ಲಿ ಕಾಲ್ನಡಿಗೆಯಲ್ಲಿ ಅಡ್ಡಾಡಿ ನೋಡಬೇಕೆಂದು ಹೊರಟ. ಬರಿಕಾಲಿನಲ್ಲೇ ಹೋಗಬೇಕೆಂದು ನಿರ್ಧರಿಸಿದ. ಒಂದಷ್ಟು ದೂರ ಹೋಗುವಲ್ಲೇ ಅವನ ಅಂಗಾಲು ನೋಯತೊಡಗಿದವು. ಆದರೂ ಮತ್ತಷ್ಟು ದೂರ ನಡೆದ. ಅಷ್ಟರಲ್ಲಿ ಅವನ ಪಾದಗಳಲ್ಲಿ ಹುಣ್ಣಾಗಿ ರಕ್ತ ಸೋರಹತ್ತಿತು. ಮತ್ತೆ ಮುಂದುವರೆಯಲಾರದೆ, ತನ್ನ ರಥ ತರಿಸಿಕೊಂಡು ಅರಮನೆಗೆ ಹಿಂತಿರುಗಿದ.

ಅರಮನೆಗೆ ಹೋದವನೇ ತನ್ನ ಸಚಿವರ ಒಂದು ಸಭೆ ಕರೆದು, ತನ್ನ ಅನುಭವವನ್ನು ಹೇಳಿ, ಇದಕ್ಕೆ ಕಾರಣವೇನು ಎಂದು ಕೇಳಿದ. ಒಬ್ಬ ಸಚಿವ "ಪ್ರಭು, ತಾವು ನಡೆದ ಹಾದಿಯಲ್ಲಿ ತಗ್ಗು ದಿಣ್ಣೆಗಳಿದ್ದವು; ಕಲ್ಲು ಮುಳ್ಳುಗಳಿದ್ದವು. ತಾವು ಎಂದೂ ಅಂತಹ ನೆಲದ ಮೇಲೆ ನಡೆದವರಲ್ಲ. ತಮ್ಮ ಕೋಮಲ ಪಾದಗಳು ಅದನ್ನು ತಾಳಿಕೊಳ್ಳಲಾರದೆ ಹುಣ್ಣಾಗುವಂತಾಯಿತು" ಎಂದ.

ಅದಕ್ಕೆ ಆ ದೊರೆ, ಈ ಸಮಸ್ಯೆಗೆ ಪರಿಹಾರವೇನು ಎಂದು ಕೇಳಿದ. ಇನ್ನೊಬ್ಬ ಸಚಿವ, "ಏನಿಲ್ಲ ಪ್ರಭು, ಎಲ್ಲ ರಸ್ತೆ–ಬೀದಿಗಳಿಗೂ ದಪ್ಪನೆಯ ಚರ್ಮದ ಹೊದಿಕೆ ಹಾಕಿಸಿದರೆ ಸಾಕು. ಮೃದುವಾದ ಚರ್ಮದ ಮೇಲೆ ಯಾವ ತೊಂದರೆಯೂ ಇಲ್ಲದೆ ನಡೆದಾಡಬಹುದು" ಎಂದ.

ಆಗ ಮತ್ತೊಬ್ಬ ಸಚಿವ "ಎಲ್ಲಾದರೂ ಉಂಟೆ? ಇರುವ ರಸ್ತೆ–ಬೀದಿಗಳೆಲ್ಲ ಚರ್ಮದ ಹೊದಿಕೆ. ಹಾಕಿಸುವುದೆಂದರೆ ಸಾಮಾನ್ಯವೆ? ಅದಕ್ಕೆ ರಾಜ್ಯದ ಬೊಕ್ಕಸವನ್ನೆಲ್ಲ ಖರ್ಚುಮಾಡಿದರೂ ಸಾಕಾಗುವುದಿಲ್ಲ" ಎಂದ.

ಹಾಗಾದರೆ ಇದಕ್ಕೆ ಪರಿಹಾರ ಹೇಗೆ? ಎಂದು ದೊರೆ ಕೇಳಿದ. ಅಲ್ಲೇ ಇದ್ದ ಒಬ್ಬ ಸೇವಕ: "ಪ್ರಭು ಏನೂ ಬೇಡ, ನಿಮ್ಮ ಕಾಲಳತೆಗೆ ಚರ್ಮ ಕಟ್ಟಿಕೊಂಡು ಹೋದರೆ ಸಾಕು" ಎಂದನಂತೆ! ಇದನ್ನೇ ಸಾಮಾನ್ಯ ಪ್ರಜ್ಞೆ ಎನ್ನುವುದು.

# ಮೆರೆಮಿಂಡಯ್ಯಗಳ ವಚನಗಳ ಪ್ರಥಮ ಪ್ರಕಟಣೆ

**ಡಾ. ಬಿ. ನಂಜುಂಡಸ್ವಾಮಿ**

*ಪಂಡಿತ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ*
*ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್*
*ಬಿ.ಹೆಚ್. ರಸ್ತೆ, ತುಮಕೂರು-೫೭೨೧೦೨.*
*ಮೊ : ೯೮೪೦೯೯೬೧೯೬*

ಬೆಂಗಳೂರು ಶ್ರೀ ಸರ್ಪಭೂಷಣ ಗ್ರಂಥಮಾಲೆಯ ನಾಲ್ಕನೇ ಪುಷ್ಪವಾಗಿ ೧೯೪೧ರಲ್ಲಿ ಪ್ರಕಟವಾದ 'ಮೆರೆಮಿಂಡಯ್ಯಗಳ ವಚನಗಳು', ಗ್ರಂಥದ ಬೆಲೆ ೦-೧-೦ ಒಂದು ಆಣಿ. ಈ ಕೃತಿ ಮುದ್ರಣಕ್ಕೆ ಆರ್ಥಿಕ ಸಹಾಯ ಮಾಡಿದವರು ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಗುರುಸಿದ್ಧಸ್ವಾಮಿಗಳು, ಶ್ರೀ ವಿರಕ್ತಮಠ, ಸೋಮವಾರಪೇಟೆ, ಕೊಡಗು-ಕರ್ಣಾಟಕ. ಇಲ್ಲಿ ಒಂದು ವಿಷಯ ಸ್ಪಷ್ಟ ಮಾಡಬೇಕು. ಶ್ರೀ ಸರ್ಪಭೂಷಣ ಗ್ರಂಥಮಾಲೆಯ ಮೂರನೇ ಪುಷ್ಪವಾಗಿ ಪ್ರಕಟವಾದ ಗ್ರಂಥ ಅಕ್ಕನ "ಯೋಗಾಂಗ ತ್ರಿವಿಧಿ", "ಮೆರೆಮಿಂಡಯ್ಯಗಳ ವಚನ" ಗ್ರಂಥ ಶ್ರೀ ಸರ್ಪಭೂಷಣ ಗ್ರಂಥಮಾಲಾದ ನಾಲ್ಕನೇ ಪುಷ್ಪ.

ಮೆರೆಮಿಂಡಯ್ಯಗಳ ವಚನದ ಸಂಗ್ರಾಹಕ-ಸಂಪಾದಕ ಜಗದೀಶ್‌ರವರು ತಮ್ಮ ಬಿನ್ನಹದಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. ಅದನ್ನು ಯಥಾವತ್ತಾಗಿ ಕೊಡಲಾಗಿದೆ:

**ಬಿನ್ನಹ**

'ಮೆರೆಮಿಂಡಯ್ಯಗಳ ವಚನ' ಎಂಬ ಈ ಪುಟ್ಟ ಗ್ರಂಥವನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ. ಇದನ್ನು ಕನ್ನಡ ಸಾಹಿತಿಗಳೂ, ವೀರಶೈವ ಬಂಧುಗಳೂ ಅಕ್ಕರೆಯಿಂದ ಸ್ವಾಗತಿಸುವರೆಂದು ನನ್ನ ನಂಬಿಕೆ.

ಈ ಗ್ರಂಥವನ್ನು ಪ್ರಕಟಿಸಲು ಎಲ್ಲ ವಿಧದಿಂದ ನನಗೆ ಮಾರ್ಗದರ್ಶಕರಾದ ಬೆಂಗಳೂರು ಸರ್ಪಭೂಷಣ ಮಠಾಧ್ಯಕ್ಷ ಶ್ರೀಮನ್ನಿರಂಜನ ಮಹಾದೇವಸ್ವಾಮಿಗಳಿಗೂ, ಮುದ್ರಣಕ್ಕೆ ಧನಸಹಾಯ ಮಾಡಿದ ಶ್ರೀಮನ್ನಿರಂಜನ ಗುರುಸಿದ್ಧಸ್ವಾಮಿಗಳಿಗೂ, ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ ಜ.ಪ. ಚನ್ನಬಸವರಾಜದೇಶಿಕೇಂದ್ರ ಸ್ವಾಮಿಗಳಿಗೂ ಮತ್ತು ಈ ಗ್ರಂಥವನ್ನು ಅಂದವಾಗಿ ಬೇಗನೆ ಮುದ್ರಿಸಿಕೊಟ್ಟ ಸ್ವತಂತ್ರ ಕರ್ಣಾಟಕ ಮುದ್ರಣಾಲಯದ ಮಾಲೀಕರಿಗೂ ಈ ಕಾರ್ಯದಲ್ಲಿ ನನಗೆ ನೆರವಾದ ಶ್ರೀ ನಿ. ನಿಜಗುಣಸ್ವಾಮಿಗಳಿಗೂ, ಶ್ರೀ ನಿ. ಈಶ್ವರಸ್ವಾಮಿಗಳಿಗೂ, ಸಿದ್ಧವೀರದೇವರಿಗೂ ನನ್ನ ವಂದನೆಗಳು.

ತಾ. ೧೫-೫-೧೯೪೧ ಇಂತು
ಬೆಂಗಳೂರು ನಗರ ಸಂಗ್ರಾಹಕ



ಈಗ ನಮಗೆ ಜಗದೀಶ ಯಾರು? ಅವರ ವಚನ ಸಾಹಿತ್ಯ ಸೇವೆಯ ವಿವರ ಗೊತ್ತಿಲ್ಲ. ಶ್ರೀ ನಿ. ಈಶ್ವರಸ್ವಾಮಿಗಳೂ, ಸಿದ್ಧವೀರದೇವರ ಬಗ್ಗೆ ವಿವರವಾದ ಮಾಹಿತಿ ಇಲ್ಲ. ಶ್ರೀ ನಿಜಗುಣಸ್ವಾಮಿಗಳು ಬೆಂಗಳೂರು ನಿಜಗುಣಮಠದ ನಿರಂಜನ ಸ್ವಾಮಿಗಳಾಗಿ ತುಂಬು ಜೀವನ ನಡೆಸಿದವರು. ಆ ಎಲ್ಲಾ ಮಹನೀಯರು ಇದ್ದಾಗ ನಾವು ಕೇಳಿದ ಪ್ರಶ್ನೆಗೆ ಉತ್ತರ ಸಿಕ್ಕುತ್ತಾ ಇತ್ತು. ಈ ಕೃತಿಗೆ ಮುನ್ನುಡಿ ಬರೆದವರು ಶ್ರೀ ಜ.ಚ.ನಿ ಸನ್ನಿಧಿಯವರು, ಮುನ್ನುಡಿಯಲ್ಲಿ ವಚನ ಸಾಹಿತ್ಯದ ತಮ್ಮ ಅಧ್ಯಯನವನ್ನು ವಿವರವಾಗಿ ತಿಳಿಸಿ ಕೊಟ್ಟಿದ್ದಾರೆ. ಮುನ್ನುಡಿಯ ಕೆಲವು ಭಾಗಗಳನ್ನು ನೀಡಲಾಗಿದೆ.

ಬೆಂಗಳೂರು ನಗರದ ಹೃದಯ ಭಾಗದ ಬಳೇಪೇಟೆಯ "ಸ್ವತಂತ್ರ ಕರ್ಣಾಟಕ ಮುದ್ರಣಾಲಯ"ದಲ್ಲಿ ಈ ಪುಟ್ಟ ಕೃತಿ ಮುದ್ರಣವಾಗಿದೆ. ಅಂದು ಮುದ್ರಣಾಲಯ ಬೆಂಗಳೂರು ಸಿಟಿ ಬಳೇಪೇಟೆ, ಹಳೇಆಸ್ಪತ್ರೆ ರಸ್ತೆಯಲ್ಲಿ ಇತ್ತು. ಈ ಮುದ್ರಣಾಲಯದ ಒಡೆಯರು ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು.

ಮೆರೆಮಿಂಡದೇವರ ವಚನಗಳು ಅಥವಾ ಮೆರೆಮಿಂಡಯ್ಯಗಳ ವಚನವನ್ನು ಫ.ಗು. ಹಳಕಟ್ಟಿಯವರು ಸಂಪಾದಿಸಿ ಮುದ್ರಣ ಮಾಡಿದ್ದು ೧೯೫೦ರಲ್ಲಿ ಅವರ ಸಂಪುಟದ ಬೆಲೆ ೦-೧೨-೦ ಆಣೆ. ಅವರ ಪುಸ್ತಕದಲ್ಲು ೧೧೧ ವಚನಗಳಿವೆ. ಸಮಗ್ರ ವಚನ ಸಂಪುಟದ ಎಂಟನೇ ಪುಸ್ತಕದ ಸಂಪಾದಕರು ಡಾ. ಬಿ.ಆರ್. ಹಿರೇಮಠರು. ಅವರು ಮೆರೆಮಿಂಡಯ್ಯಗಳ ಬಗ್ಗೆ ಈ ಮಾಹಿತಿಯನ್ನು ನೀಡಿದ್ದಾರೆ. "ಈ ವಚನಕಾರನ ಜೀವನ ವೃತ್ತಾಂತದ ವಿವರ ಗೊತ್ತಾಗುವುದಿಲ್ಲ. ತೆಲುಗು-ಕನ್ನಡ ಬಸವಪುರಾಣ, ಹರಿಹರನ ರಗಳೆ, ವೃಷಬೇಂದ್ರ ವಿಜಯ ಹಾಗೂ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಗ್ರಂಥಗಳಲ್ಲಿ ಪ್ರಸ್ತಾಪಿತವಾದ ಮೆರೆಮಿಂಡಯ್ಯನು ೬೩ ಪುರಾತನರಲ್ಲೊಬ್ಬನಾದ, ಮೆರೆಮಿಂಡಯ್ಯನಿಗಿಂತ ಬೇರೆಯಾಗಿದ್ದಾನೆ. ಈತನ ವಚನಾಂಕಿತ 'ಐಘಟದೂರ ರಾಮೇಶ್ವರಲಿಂಗ'. ಇವನು ಅಷ್ಟಾವರಣ, ಲಿಂಗಾಂಗ ಸಾಮರಸ್ಯ ಮೊದಲಾದ ವೀರಶೈವ ತತ್ತ್ವಗಳನ್ನು ಸರಳ ರೀತಿಯಲ್ಲಿ ಹೇಳಿದ್ದಾನೆ. ಏಕೋರಾಮಿತಂದೆ, ಪಂಡಿತಾರಾಧ್ಯ, ರೇವಣಸಿದ್ಧೇಶ್ವರದೇವ, ಸಿದ್ಧರಾಮೇಶ್ವರ, ಮರುಳಸಿದ್ಧೇಶ್ವರ, ಸಕಲೇಶ ಮಾದರಸ, ತೆಲುಗು ಬೊಮ್ಮಯ್ಯ, ಕೇಶಿರಾಜಯ್ಯರನ್ನು ಭಕ್ತಿಯಿಂದ ತನ್ನ ವಚನಗಳಲ್ಲಿ ಸ್ಮರಿಸಿದ್ದಾನೆ. ವಚನಗಳಲ್ಲಿ ಬಳಕೆಯಾದ ಉಪಮೆ ದೃಷ್ಟಾಂತಗಳು ಸಹಜವಾಗಿದ್ದು, ಸ್ವಾರಸ್ಯಪೂರ್ಣವೆನಿಸುತ್ತವೆ. ಈತನ ವಚನಗಳ ಅಭಿವ್ಯಕ್ತಿ ನೇರವಾಗಿದ್ದು, ಅರ್ಥೈಸಲು ತೀರ ಸುಲಭವಾಗಿರುತ್ತವೆ. ಭಾವಗೀತೆಯ ಗುಣವನ್ನು ಹೊಂದಿದ ಕೆಲವು ವಚನಗಳು ಇಲ್ಲಿವೆ. ಸಮಗ್ರ ವಚನ ಸಂಪುಟದಲ್ಲಿ ಈತನ ೧೧೦ ವಚನಗಳಿವೆ.

೧) ಇಚ್ಛಾಶಕ್ತಿ ರೂಪಾಗಿ ಬ್ರಹ್ಮಪದವಾಯಿತ್ತು ।
೨) ಕಾಮವ ಬ್ರಹ್ಮಗಿಕ್ಕಿ ಮೋಹವ ವಿಷ್ಣುಗಿಕ್ಕಿ ।
೩) ಕಾಮದಲ್ಲಿ ಅಳಿದು ಕ್ರೋಧದಳ್ಳುರಿಯಲ್ಲಿ ಬೆಂದು
೪) ಪೃಥ್ವಿಸದ್ಯೋಜಾತನ ಹಂಗು ಜಲ ವಾಮದೇವನ ಹಂಗು ।
೫) ಶರೀರ ಬೆಳೆದು ಪ್ರಳಯಕ್ಕೊಳಗು ಬುದ್ಧಿ ಬೆಳೆದು ಸುಖಕ್ಕೊಳಗು
೬) ಧನವಗಳಿಸಿದವ ಹೆಣನಾದ ಧರೆಯಗಳಿಸಿದವ ಅರಿಗಳಿಗೆ ವೊಡಲಾದ
। ೭) ಅತೀಂದ್ರಿಯರೆಲ್ಲರೂ ಮದನನ ಮನೆಯ ಬಿಸಿಕುಡಿಕೆಯ

ನೀರಂಮೆರವುರಕ್ಕೊಳಗಾದವರು
೮) ತನ ವರನ್ಯರಿಹರು ಹೆಣ್ಣು ಹೊನ್ನು ಮಣ್ಣು ಹಿಡಿದು ಹೊರಲಾಗಿ
೯) ಆಸೆ ತ್ರಿವಿಧವ ಗೊತ್ತು ನಿರಾಶೆ ಏಕಮಯನ ಗೊತ್ತು
೧೦) ಲಕ್ಷಿಸಿಕೊಂಡಿಹನೆಂದಡೆ ಅಲಕ್ಷ್ಯ ಅನಾಮಯ
೧೧) ಪಟುಕದ ಘಟದಲ್ಲಿ ರಜನೀರ ತುಂಬಿ ಧವಲಪುರಿ ಸೂತ್ರವುಂಟೆ?
೧೨) ಐಶ್ವರ್ಯವುಳ್ಳವಂಗೆ ನಿಜಭಕ್ತಿಯಿಲ್ಲ
೧೩) ಕುಟಿಲಕ್ಕಲಿದೆ ಜಗಸಿಕ್ಕದು
೧೪) ವ್ರತಭ್ರಷ್ಟನ ಗುರುಘಾತುಕನ ವಂದಿಸಿ ನಿಂದಿಸುವನ ।
೧೫) ಭಾಷೆ ತಪ್ಪಿದ ಬಂಟ ನಿಷ್ಣಾತವಿಲ್ಲದವನ ಅರಿವು
೧೬) ಕರ್ತೃ ಭೃತ್ಯ ಭಾವದಲ್ಲಿ ಸರಸ ಪರಿಹಾಸಕ ಸುರತಸಂಗ?
೧೭) ಠಕ್ಕುರಂಗೆ ವಾಜಕ ಭೂಪತಿಗೆ ದೆಸೆ ಅಜಾತಂಗೆ ನಿಶ್ಚಯ
೧೮) ನಾನಾಫಲವ ಸಲಹುವಲ್ಲಿ ಮೂಲವೇಳೆಯನರಿತು ನೀರ ನೆರೆಯಬೇಕು
೧೯) ಪಾದತೀರ್ಥವ ಕೊಂಡಲ್ಲಿ ತೃಷೆಯರತು
೨೦) ಎಂಭತ್ತು ನಾಲ್ಕು ಲಕ್ಷ ಜೀವವ್ರತ ಐವತ್ತಾರು ನೇಮವ್ರತ
೨೧) ಭಕ್ತನಾದಲ್ಲಿ ಪಂಕವ ಹೊದ್ದದವಾರಿಯಂತಿರಬೇಕು
೨೨) ಶಬ್ದ ಶಾಸ್ತ್ರಂಗಳಲ್ಲಿ ತಿಳಿದು ನ್ಯೂವಾದಿಗಳಿಲ್ಲದೆ ನುಡಿದು
೨೩) ಭಕ್ತಿಹೋಯಿತ್ತು ಗುರುವಿನಲ್ಲಿ ಇದಿರಾಂತಲ್ಲಿ
೨೪) ಅಶನದಾಸೆಗೆ ಆಚಾರವ ತಪ್ಪಿ
೨೫) ಲಿಪಿಯಾಗಲಿ ಕೃಷಿಯಾಗಲಿ
೨೬) ಪ್ರಸಾದವ ಕೊಂಡಲ್ಲಿ ಪ್ರಾಣದಾಸೆಯಿಲ್ಲದಿರಬೇಕು
೨೭) ರಾಜರ ಬಾಗಿಲಲ್ಲಿ ನಿಂದು ಕೂಗಿ ಮೊರೆಯಿಟ್ಟು
೨೮) ತಡವನ ಬಾಗಿಲಲ್ಲಿ ನಿಂದು
೨೯) ವಾಹನದ ಕೀಳಾಗಿ ತಿರುಗುವ ಚೂಣಿಯಲ್ಲಿ ಹೋಹವೇಳೆಯ
೩೦) ಭೋದೆಯ ಹೇಳುವುಂಬುವಂಗೆ ಆಗುದೆಗೆಯ ಮಾತೇಕೆ?
೩೧) ಮಣ್ಣು ಬೆಂದು ಮಡಕೆಯಾಗಿ
೩೨) ಕಾಣಬೇಕೆಂದು ಮುಂದೆ ನಿಂದು
೩೩) ಹೆರುವ ಹೆಂಗೊಸು ಕೂಸುಸಿಕ್ಕಿ ತನ್ನ, ವುಡಿಯ ತೋರುವಂತೆ
೩೪) ಇರುಳಿಗೆ ಮೂಲೆಯೋನಿ ಆದರೆ
೩೫) ಗುರುವಿಗೆ ಲಿಂಗ ಸಾಕ್ಷಿ ಲಿಂಗಕ್ಕೆ ಜಂಗಮಸಾಕ್ಷಿ
೩೬) ನರದೇಹವತೊಟ್ಟು ತಾ ಗುರುವೆಂದು
೩೭) ಕಾಲವಿರಹಿತ ಗುರುವಾಗಬೇಕು
೩೮) ಬೀಜರುವಾಗಿ ಅಂಕುರಲಿಂಗವಾಗಿ
೩೯) ರಂಗವ ಕಳೆದು ನಿಂದನಿಹಂಗ ವೈರಿಯಂತೆ
೪೦) ಅರಿದವನಿರವ ಕಮಠದ ಲಿಂಗದಂತೆ
೪೧) ಹುಡಿಹತ್ತದ ಗಾಳಿಯಂತೆ
೪೨) ಕಾಳಿಕೆಹರಿಂದ ಹೇಮದಂತೆ



೪೩) ಅಂಬುಜಾತದ್ವಾರವಳಿವೆಳವಾದಡೆ ನಾದಕ್ಕೆ ಸಿಕ್ಕುಂಟೆ ಅಯ್ಯಾ
೪೪) ಕುರುಹಿಟ್ಟಲ್ಲಿ ಅರಿವು ನಷ್ಟವಾಯಿತು
೪೫) ನೀರೊಳಗಣಕಿಚ್ಚಿಗೆ ನೀರೆ ತಾಯಿ
೪೬) ನೀರೊಳಗಣ ಕಿಚ್ಚು ತಾಯಲ್ಲಿ ಅಡಗಿತ್ತು
೪೭) ಸ್ಥೂಲದಿಂದ ಕಾಂಬುದು
೪೮) ಕಂಡುಹಿಡಿವುದು ಘಟದ ಭೇದ
೪೯) ಕಂಡೆನೆಂದಡೆ ಮುಂದಕ್ಕೊಂದು ನರಿಬಿದ್ದಿತ್ತು
೫೦) ಅಪ್ಪುಮಯಬಲಿದು ಜಗಕಾರವಾಗಿನಿಂದಲ್ಲಿ
೫೧) ಇಷ್ಟಲಿಂಗ ಸಂಬಂಧ ಮುಕ್ತಿಪದ
೫೨) ಪಂಚೇಂದ್ರಿಯಂಗಳಲ್ಲಿ ಲಿಂಗಮುಖವಾಗಿ ಕೊಳ್ಳಬೇಕೆಂದೆಂಬರು
೫೩) ಮನೆಯಲ್ಲಿ ಮನುಜರು ಅಡಗುವರಲ್ಲದೆ
೫೪) ಸರ್ವವೆಲ್ಲವೂ ವಸ್ತುವಿನ ಅಧೀನವಾದಲ್ಲಿ
೫೫) ಸರ್ವವೆಲ್ಲವೂ ವಸ್ತುವಿನ ಅಧೀನವಾದಲ್ಲಿ
೫೬) ಸ್ಥಾಣುವಿನ ರಜ್ಜು ಮಿರ್ತಿಯ್ಯೆದದೆ
೫೭) ತನ್ನ ಕಾಯಸಿದೆಯಲ್ಲದೆ
೫೮) ಆಡುವಾತ ಗಣಿಮಿಣಿಯಲ್ಲಿ ಕುಣಿದಡೆ
೫೯) ಸ್ವಪ್ನದ ಭಾಷೆ ಮರ್ತ್ಯರ ಮುಟ್ಟದ ಭಕ್ತಿ
೬೦) ಉರ್ಧ್ವ ಮುಖದಲ್ಲಿಯ್ಯೆದಿದ ವಿಹಂಗ
೬೧) ಮನಮುಟ್ಟದ ಪೂಜೆ ಮಣ್ಣ ಗೋಡೆಯ ತೊಳೆದು
೬೨) ವಾಯುವೆದ್ದು ವರ್ಣತ್ರಣಿ ಪಟವನೆತ್ತುವಂತೆ
೬೩) ಪಶುವಾಹನವ ಕಟ್ಟುವುದಕ್ಕೆ ನೆಟ್ಟಿಗೆ ಗೊತ್ತಿಲ್ಲದೆ ಕಟ್ಟಲಿಲ್ಲ
೬೪) ವಾಯು ಪಟವಾಡುವಲ್ಲಿ
೬೫) ಮೊನೆಯಿರಿವಡೆ ಕರವಿಡಿವಲ್ಲಿ ಯಿರಿದಲ್ಲವಾಗದು
೬೬) ಕುಂಭ ಘಟದಂತೆ ಕರುಹಾಗಿ ತುಂಬದ ಜಲದಂತೆ ಮನವಾಗಿ
೬೭) ದ್ವೈತವಳಿದು ಅದ್ವೈತವಾಗಬೇಕು
೬೮) ಪಾಕವನರಿತು ಮಾಡುವ ಗರತಿಯಂತೆ
೬೯) ಮೇಘವೋ ಸರಿ, ಧರೆಯಲ್ಲಿನಿಂದು
೭೦) ಮಣ್ಣಿನಲ್ಲಿ ನೀರ ಬೆರಿಸಿ ಮರ್ದಿಸಲಾಗಿ
೭೧) ಅಪ್ಪುವಾಸವ ತುಂಬುವ ತಿಪ್ಪಣದಂತೆ
೭೨) ಕೈಕಾಲಲ್ಲಿ ಕೊಂಡಡೇನು
೭೩) ಇಚ್ಛಾಶಕ್ತಿ ಸ್ವರೂಪ ವರ್ತುಳವಾಗಿ
೭೪) ಉಂಟೆಂಬುದು ಭಾವದ ನೆಮ್ಮುಗೆ
೭೫) ಮುಟ್ಟಿದ ಅಡಿಯೆ ಧೃಡವಾಗಿಮೆಟ್ಟಿ
೭೬) ಗರ್ಭದಲ್ಲಿ ಶಿಶುಬಲಿದು ಹಸಿದೆವೆಂದು ಅತ್ತುದುಂಟೆ ಅಯ್ಯಾ?
೭೭) ಅಂಗಲಿಂಗ ಸಮಂಧದಿರವು
೭೮) ಬೀಜಕೊಳೆತಾಗ ಅಂಕುರನಷ್ಟವಾಯಿತ್ತು

೭೯) ಮರದ ಘಟಕ್ಕೆ ತೊಗಲಬಿಗಿದು ಹೊಡೆಯೆ
೮೦) ಕುಸುಮವೊಣಗಿದಾಗ ಸೌರಭವಡಗಿತ್ತು
೮೧) ಅಪ್ಪುವಿಲ್ಲದ ಯೇರಿ ಚಿತ್ತವಿಲ್ಲದ ಘಟ
೮೨) ತಾಮಿೊವನ್ನಕ್ಕ ಲಿಂಗಕ್ಕೆ ಮಜ್ಜನ
೮೩) ಸತ್ಕ್ರಿಯೆಯೆಂಬುದೇ ಜ್ಞಾನ ಜ್ಞಾನವೊಡಲೇಕ್ರಿ
೮೪) ಕುರುಹೆಘಟವಾಗಿ ಅರಿವೆ ಆತ್ಮನಾಗಿ
೮೫) ಮನೆಯ ಹೊರಗಿದ್ದವನೆ
೮೬) ಫಲರಸವನಿರಿಸಿ ಕೊಂಡಿದ್ದಂತೆ
೮೭) ಕ್ರಿಭಾವಶುದ್ಧತೆ ಆದನನಿರವು
೮೮) ಆದ್ರಿಯಲ್ಲಿ ಕರೆಯೆ
೮೯) ಮರುತ ಸಂಗವ ಮಾಡಿದವುರಿ, ವಾರಿಗಂಧದಂತೆ
೯೦) ವಿಷದೇಹಿಗೆ ಆಹಾರವೊದಗದೆ
೯೧) ಕ್ರಿಯೆತೆರನರಿಯೆನೆಂದು ಬಿಡಬಹುದೇ ಆಚಾರವ?
೯೨) ಅರಿವೆಂಬುದೆಕ್ರಿ ಕ್ರಿಯೆಂಬುದೆ ನಿರವಯ
೯೩) ಚಿನ್ನವಿಶೇಷ ಮಣ್ಣು ಅಧಮವೆಂದಡೆ
೯೪) ಇಷ್ಟದ ಪೂಜೆಯನರಿವುದಕ್ಕೆ
೯೫) ಕ್ರಿಯಾಸಂಪದನಾದಲ್ಲಿ ಉರಿಕಾಷ್ಟವ ವೇದಿಸಿದಂತಿರ ಬೇಕು
೯೬) ಇಷ್ಟಲಿಂಗ ವಸ್ತುವನರಸುವುದಕ್ಕೆ ದೃಷ್ಟವಿಲ್ಲ
೯೭) ಮೊದಲು ರೂಪಾದ ಬಿತ್ತ ಭೂಮಿಯಲ್ಲಿ ಬಿತ್ತಿ
೯೮) ಇಷ್ಟಪ್ರಾಣಯೋಗ ಸಂಬಂದ
೯೯) ಒಂದ ಬಿಟ್ಟೊಂದ ಹಿಡಿದಿಹೆನೆಂದಲ್ಲಿ ಸಿಕ್ಕಿತ್ತು ಅರಿವು
೧೦೦) ಸ್ವಪ್ನದಲ್ಲಿ ಮರದು ಸಕಲವಕಂಡು ಅರಿದು ಹೇಳುವುದು
೧೦೧) ಅಂಗದಲ್ಲಿದ್ದು ಕೈಗೆ ಬಂದೆ
೧೦೨) ಅಂಗದಲ್ಲಿ ಕಟ್ಟಿದ ವಸ್ತ್ರವ ಬಿಟ್ಟು ನೋಡಲಾಗಿ [ಇಂತಿನಲ್]

ಅಪ್ರಕಟಿತ ವಚನ ಸಾಹಿತ್ಯದ ಪ್ರಕಟಣೆಯಲ್ಲಿ ಸಾಕಷ್ಟು ಜನ ತಮ್ಮ ಪಾಲಿನ ಸೇವೆಯನ್ನು ಸಲ್ಲಿಸಿದ್ದಾರೆ. ಅಂದು ಪ್ರಕಟವಾದ ಕಿರಿದಾದ ಪುಸ್ತಕಗಳು ಕಾಲಗರ್ಭದಲ್ಲಿ ಅಡಗುವ ಮುನ್ನ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಆಧುನಿಕ ಎಲೆಕ್ಟ್ರಾನಿಕ್ ಉಪಕರಣಗಳ ಸಹಾಯದಿಂದ ಕಂಪ್ಯೂಟರ್‌ನಲ್ಲಿ ಭದ್ರಪಡಿಸಬೇಕು. ಬೇಕೆಂದು ಬಂದವರಿಗೆ ಸುಲಭವಾಗಿ ಅವರಿಗೆ ಲಭ್ಯವಾಗುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯ.

**ಆತ್ಮಂಗೆ ಕಾಯುವೆ ರೂಪು**
**ಆ ಕಾಯಕ್ಕೆ ಆತ್ಮನೆ ಹಾಹೆ**
**ಆ ಹಾಹೆಗೆ ಅರಿವೇ ಬೀಜ**
**ಆ ಬೀಜಕ್ಕೆ ಗೋಪತಿನಾಥ ವಿಶ್ವೇಶ್ವರಲಿಂಗವೆ ನಿರ್ವೀಜ**



# ಎರಡಳಿದು ಒಂದಾದಾಗಲೇ ಸಮಾಧಾನ ನೆಲೆಯಾಗಿತ್ತಯ್ಯ...

**ವೆಂಕಟೇಶ ಕೆ. ಜನಾದ್ರಿ**
*ಲೆಕ್ಕಪತ್ರ ಅಧೀಕ್ಷಕ, ಕಕರಸಾ.ಸಂಸ್ಥೆ*
*ಕಲಬುರ್ಗಿ ವಿಭಾಗ-2, ಕಲಬುರ್ಗಿ-585102*
*ಮೊ: 9945330492*

"ಮಡದಿ ಎನ್ನಲಾಗದು ಬಸವಂಗೆ ಎನ್ನನು, ಪುರುಷನೆನಲಾಗದು ಬಸವನ ಎನಗೆ,,. ಉಭಯದ ಕುಳವ ಹರಿದು ಬಸವಂಗೆ ಶಿಶುವಾದೆನು, ಬಸವನೆನ್ನ ಶಿಶುವಾದನು". ಪುರುಷ-ಮಹಿಳೆ, ಪತಿ-ಸತಿ ಸಂಬಂಧಗಳಲ್ಲಿ ಯಾವುದೂ ಮೇಲೂ ಇಲ್ಲ ಕೀಳೂ ಇಲ್ಲವೆಂಬುದಕ್ಕೆ ಇಲ್ಲಿ ನೀಲಾಂಬಿಕೆ ತನ್ನ ವಚನದ ಮೂಲಕ ಉತ್ತರವಾಗಿದ್ದಾಳೆ. ಬಸವನ ಮಡದಿಯಾಗಿದ್ದರೂ ಅನುಭಾವಿಕ ನೆಲೆಯಲ್ಲಿ, ವೈಚಾರಿಕತೆಯ ಪಥದಲ್ಲಿ ಬಸವಣ್ಣನಿಗೆ ತಾನು ಮಡದಿಯಲ್ಲ, ತನಗೆ ಬಸವಣ್ಣ ಪತಿಯಲ್ಲ. ಇಬ್ಬರೂ ಕೂಡಿ ಚಿಂತಿಸಿದಾಗ ಉದಯಿಸಿದ ವಿಚಾರ/ವಚನಗಳೆಂಬ ಶಿಶುಗಳವರು. ಬಸವನಿಗೆ ನೀಲಾ ವಿಚಾರಶಿಶು, ನೀಲಾಗೆ ಬಸವ ವಿಚಾರಶಿಶು... ಹೀಗೆ ಬಸವನ ವಿಚಾರ ಪತ್ನಿಯಾಗಿ ನೀಲಮ್ಮ ಶಿವಶರಣೆಯರಲ್ಲಿ ವಿಶಿಷ್ಟವಾಗಿ ತಮ್ಮನ್ನು ಅನಾವರಣವಾಗಿಸಿಕೊಂಡವರು.

ನೀಲಾಂಬಿಕೆಯನ್ನು ನೀಲಲೋಚನೆ, ನೀಲಮ್ಮ ಎಂದೂ ಕರೆಯುವುದುಂಟು. ಈಕೆಯ ಕಾಲ ಕ್ರಿ.ಶ. ೧೧೬೦. ನೀಲಾ ಬಸವಕಲ್ಯಾಣದಲ್ಲಿ ಜನಿಸಿರಬಹುದೆಂಬ ಊಹೆ. ಬಸವಣ್ಣನವರ ವಿಚಾರ ಪತ್ನಿ. ಸಿದ್ದರಸ ಮಂತ್ರಿಯ ಮಗಳು-ಬಿಜ್ಜಳ ರಾಜನಿಗೆ ಸಾಕು ಸಹೋದರಿಯಾಗಿ ಕಲ್ಯಾಣದಲ್ಲಿ ಎಲ್ಲರಿಗೆ ಬೇಕಾದ ಮಹಾನ್ ಶರಣೆ. ಬಸವಣ್ಣ ಕೈಕೊಂಡಿದ್ದ ತ್ರಿವಿಧ ದಾಸೋಹಕ್ಕೆ ತನು-ಮನ-ಅನುಭಾವದಿಂದ ಸಹಕರಿಸುತ್ತಿದ್ದಳು. ಸಿದ್ದರಾಮಯ್ಯನವರ ಒಂದು ವಚನದಲ್ಲಿ ಹೀಗಿದೆ: ಅಲ್ಲಮನ ಎರಡೆಂಬೆತ್ತು ಕೋಟಿ ವಚನಗಳು, ಮಡಿವಾಳಯ್ಯನ ಮೂರು ಕೋಟಿ ವಚನಗಳು. ಹೀಗೆ ಹಲವು ಶರಣರ ವಚನಗಳ ಕೋಟಿ/ಲಕ್ಷಗಳ ಪ್ರಮಾಣದಲ್ಲಿ ಹೇಳುತ್ತಾ ನೀಲಮ್ಮನ ವಚನಗಳು "ಲಕ್ಷದ ಹನ್ನೊಂದು ಸಾಸಿರ" ಎಂದಿದ್ದಾರೆ. ಹಾಗಾದರೆ ಅಂದು ಕಲ್ಯಾಣದ ಶರಣರು ರಚಿಸಿದ ಒಟ್ಟು ವಚನಗಳು ಎಷ್ಟು ಕೋಟಿ? ಲೆಕ್ಕವಿಲ್ಲ. ಲೆಕ್ಕವಿಲ್ಲದಷ್ಟಿದ್ದ ಅವುಗಳೆಲ್ಲ ಕಲ್ಯಾಣದ ಕ್ರಾಂತಿಯಲ್ಲಿ ಸುಟ್ಟು ಬೂದಿಯಾಗಿ ವಿಭೂತಿಯಾಗಿ ಇಂದಿಗೂ ಲಿಂಗವಂತರ ಹಣೆಯನ್ನೇರಿವೆ. ಆದರೆ ಹಾಗೆ ಹಣೆಯನ್ನೇರಿದ ಆ ವಿಭೂತಿ ಅನುಭೂತಿಯಾಗಿಲ್ಲದಿರುವುದೇ ವಿಷಾದದ ವಿಷಯ.

ಈ ಪ್ರಮಾಣದ ವಚನಗಳು ಇಷ್ಟೆಲ್ಲ ಹಾಳಾಗಿದ್ದರ ಮಧ್ಯೆ ಜೀವ ಉಳಿಸಿಕೊಂಡು ಉಳಿದಿರುವ ಕೇವಲ ಸುಮಾರು ಇಪ್ಪತ್ತು-ಮೂವತ್ತು ಸಾವಿರ ವಚನಗಳು ನಮಗಿಂದು

ದೊರಕಿದೆಯೆಂದರೆ ಎಂಥಹ ದುರದೃಷ್ಟ. ಅವುಗಳಲ್ಲಿ ಕೆಲವು ನಮಗೆ ಉಸಿರಾಗಲು ಹವಣಿಸುತ್ತಿವೆ. ಅವುಗಳನ್ನು ಉಸಿರಾಗಿಸಿಕೊಳ್ಳಬೇಕಾದದ್ದು ನಮ್ಮ ಹೊಣೆ. ವಚನಗಳ ನುಡಿಗಳನ್ನು ನಮ್ಮ ನಡೆಯಾಗಿಸಿಕೊಳ್ಳಬೇಕಿರುವುದು ನಮ್ಮ ಜಂಗಮ. ಹಾಗೆಂದು ದುಷ್ಕರ್ಮಿಗಳ ಕ್ರೌರ್ಯಕ್ಕೆ ಆಹುತಿಯಾಗಿ ಅಳಿದವುಗಳ ಕುರಿತು ಚಿಂತಿಸದೇ ಉಳಿದವುಗಳ ಬಗೆಗೆ ಚಿಂತನ–ಮಂಥನ ಮಾಡಿ, ಆ ವಚನಗಳನ್ನು ಪಚಿಸಿಕೊಂಡು, ಅಲ್ಲಿಯ ಅನುಭಾವಿಕ ನುಡಿಯನ್ನು ನಮ್ಮ ನಡೆಯಾಗಿಸಿಕೊಳ್ಳಬೇಕಾದದ್ದು ನಮ್ಮೆಲ್ಲರ ಹೊಣೆ. ಹೀಗೆ ನಮ್ಮ ನಡೆಯನ್ನು ಕಂಡು ನಮ್ಮೊಳಗಣ ಲಿಂಗ ಮೆಚ್ಚಿ ಹೌದಹುದೆಂದಾಗಲೇ ಅವು ಸಾರ್ಥಕ್ಯಗೊಳ್ಳುತ್ತವೆ. ಹೀಗೆ ನೀಲಮ್ಮನವರ ಒಂದು ಲಕ್ಷ ಹನ್ನೊಂದು ಸಾವಿರ ವಚನಗಳಲ್ಲಿ ಇಂದು ಓದಲು ಲಭ್ಯವಿರುವುದು ಕೇವಲ ೨೮೮ ವಚನಗಳು. ನೀಲಮ್ಮನ ಅಂಕಿತ "ಸಂಗಯ್ಯ" ಮತ್ತು "ಬಸವಯ್ಯ" ಎಂದಿದೆ.

ಸಿದ್ಧರಾಮರು ನೀಲಮ್ಮನ ಕುರಿತು "ಲಿಂಗವ ಪೂಜಿಸಿದ ಫಲ ನೀಲಲೋಚನೆ ಗಾಯಿತ್ತು" ಎನ್ನುತ್ತಾರೆ. ತಮ್ಮ ತಮ್ಮ ಇಷ್ಟಲಿಂಗವನ್ನೆಲ್ಲರೂ ಪೂಜೆ ಮಾಡುತ್ತಾರೆ. ಕೆಲವರು ಅರ್ಥಪೂರ್ಣವಾಗಿ ಪೂಜಿಸಿಕೊಳ್ಳಲೂಬಹುದು. ಆದರೆ ನೀಲಮ್ಮ ಇಷ್ಟಲಿಂಗದೊಂದಿಗೆ ತಮ್ಮೊಳಗಿನ ಆತ್ಮಲಿಂಗವನ್ನೇ ಪೂಜಿಸಿಕೊಳ್ಳುತ್ತಿದ್ದರು. ಪತಿ ಬಸವಣ್ಣನನ್ನು ಆಂತರ್ಯದಲ್ಲಿ ಪ್ರತಿಷ್ಠಾಪಿಸಿಕೊಂಡಿದ್ದಾಕೆಗೆ ಬಸವಣ್ಣನ ವಿಚಾರಗಳೇ ನೀಲಮ್ಮ, ನೀಲಮ್ಮನ ವಿಚಾರಗಳೇ ಬಸವ ಚಿಂತನಗಳಾಗಿದ್ದವು. ಹೀಗೆ ಅವರು ಸತಿಪತಿಗಳಿಂದೊಂದಾಗಿ ಶಿವಂಗೊಲಿಯುವಂತೆ ಶಿವಯೋಗದ ಭಕ್ತಿ ಮಾಡುತ್ತಿದ್ದರು. "ಲಿಂಗವ ಪೂಜಿಸಿ ಫಲವೇನು? ಸಮರತಿ ಸಮಕಳೆ ಇಲ್ಲದನ್ನಕ್ಕ" ಎನ್ನುವಂತೆ ನೀಲಮ್ಮ ಇಷ್ಟಲಿಂಗವನ್ನೇ ಭಾವಲಿಂಗವನ್ನಾಗಿಸಿಕೊಂಡು ಅನುಭಾವಿಕ ನೆಲೆಯಲ್ಲಿ ಪೂಜಿಸಿಕೊಂಡು ಪ್ರಸಾದವಾಗಿಸಿಕೊಳ್ಳುತ್ತಿದ್ದಳು.

ಬಸವಣ್ಣನ ಸಮಗ್ರ ಕ್ರಾಂತಿಯ ಬಗೆಗೆ ನೀಲಾ ಬೆರಗಾಗಿದ್ದಳು. "ಮರ್ತ್ಯಲೋಕವನೆ ಮಹಾಪ್ರಮಥರ ಬಿಡಾರವ ಮಾಡಿದಾತ, ಕೈಲಾಸವನೆ ಕಲ್ಯಾಣ ಮಾಡಿದಾತ ಬಸವಯ್ಯ" ಎನ್ನುತ್ತಾಳೆ. ಈ ಮಾತು ನಿಜ, ಬಸವಣ್ಣ ಅಂದಿನ ವ್ಯವಸ್ಥೆಯಲ್ಲಿ ಕೇವಲ ಕೆಲವರ ಕಪಿಮುಷ್ಟಿಯಲ್ಲಿ ಬಂಧಿಯಾಗಿದ್ದ ದೇವರನ್ನು ಮುಕ್ತವಾಗಿಸಿ, ಎಲ್ಲರ ಕೈಯಲ್ಲಿಯೇ ಕೊಟ್ಟು ಅವರಿಗೆ ಭಕ್ತರಾಗುವುದನ್ನು, ಗುರುವಾಗುವದನ್ನು, ತಾವೇ ಶರಣರಾಗುವುದನ್ನು ಪರಿಚಯಿಸಿದ. ಅವರನ್ನು ಹಾಗೆ ಪರಿವರ್ತಿಸಿ ಈ ಭೂಮಿಯನ್ನೇ ಮಹಾಪ್ರಮಥರ ಬಿಡಾರವನ್ನಾಗಿಸಿದ. ಕಲ್ಯಾಣವನ್ನು ಕೈಲಾಸವಾಗಿಸಿ, ಕೈಲಾಸಕ್ಕೆ ಕಲ್ಯಾಣವನ್ನು ಪರಿಚಯಿಸಿ ಕೈಲಾಸವನ್ನೇ ಕಲ್ಯಾಣವಾಗಿಸಿದನೆಂದು ಮನದುಂಬಿ ವಚಿಸಿದ್ದಾಳೆ.

ನೀಲಾ ಎಲ್ಲವನ್ನರಿತಿದ್ದರೂ ತಾನೇ ಕಿರಿಯಳೆಂದು ಬಸವನ ಧೋರಣೆಯನ್ನ ನುಸರಿಸಿದ್ದಾಳೆನ್ನುವುದಕ್ಕೆ "ನಾನು ಮಾದಾರ ಚೆನ್ನಯ್ಯನ ಮೊಮ್ಮಗಳು" ಎಂದು ಒಂದು ವಚನದಲ್ಲಿ ಹೇಳಿದ್ದೇ ಸಾಕ್ಷೀಕರಿಸಿದೆ. ಅಂದಿನ ವ್ಯವಸ್ಥೆಯಲ್ಲಿ ಕಟ್ಟಕಡೆಯ ವ್ಯಕ್ತಿಯೊಂದಿಗೆ ಗುರುತಿಸಿಕೊಳ್ಳುವ ಮೂಲಕ ವಿಶಿಷ್ಟವಾಗಿ ಇಲ್ಲಿ ನೀಲಮ್ಮ ಎತ್ತರವಾಗುತ್ತಾರೆ. ಹಾಗೆಯೇ ಎಲ್ಲರನ್ನು ಬೆರಗಾಗಿಸುತ್ತಾರೆ. ನಾನೊಬ್ಬನೇ ಭಕ್ತ ಎಂದು ಎಲ್ಲರನ್ನು ಬೆರಗಾಗಿಸಿ, ನಂತರ ನೀವೆಲ್ಲರೂ ಗುರುಗಳೆಂದು ಗುರುತಿಸಿದ ಬಸವಣ್ಣನಾಗಲೀ ನೀಲಮ್ಮನಾಗಲೀ ವಿನೀತಭಾವದ



ಶರಣತ್ವವನ್ನಳವಡಿಸಿಕೊಂಡಿದ್ದವರು. ಶರಣರ ಶರಣತನವಿರುವುದೇ ನಡೆಯೊಳಗೆ ನುಡಿಯನ್ನಳವಡಿಸಿಕೊಂಡ ಇಂಥವರಲ್ಲಿಯಲ್ಲವೇ?

"ಎರಡಿಲ್ಲದ ಅಂಗಕ್ಕೆ ಒಂದೆ ಕುರುಹಿಲ್ಲದ ಸ್ಥಲವಾಯಿತ್ತು, ಸಂಧು ಸಂಶಯ ಬೇಧವಳಿದು, ಸಮಾಧಾನ ನೆಲೆಗೊಂಡಿತ್ತಯ್ಯ ಸಂಗಯ್ಯ"

ನೀಲಮ್ಮನ ಈ ಮೇಲಿನ ವಚನದಲ್ಲಿ ಲಿಂಗಾಂಗ ಸಾಮರಸ್ಯದ ಕುರಿತಾಗಿ ಮಾರ್ಮಿಕವಾದ ಅನುಭಾವವಿದೆ. ಅಂಗ ಮತ್ತು ಲಿಂಗ ಬೇರೆಯಲ್ಲ. ಎರಡೂ ಒಂದೆಯಾದಾಗ ಅದುವೇ ಕುರುಹಿಲ್ಲದ ಅಂದರೆ ನಿರಾಕಾರ ದೇವನ ಸ್ಥಲವಾಗುತ್ತದೆ. ಹೀಗೆ ಎರಡಿಲ್ಲದ ಅಂಗ ಸಂಧು ಸಂಶಯವೆಂಬ ಬೇಧವಳಿದು ಕೂಡಿಕೊಳ್ಳಬೇಕಾದ ಪ್ರಕ್ರಿಯೆಯೇ ಲಿಂಗಾಂಗ ಸಾಮರಸ್ಯ ಅಥವಾ ಶಿವಯೋಗ. ಲಿಂಗ ಮತ್ತು ಅಂಗ ಸಾಮರಸ್ಯವಾದಾಗ, ನಮ್ಮ ಯೋಗ ಶಿವನಲ್ಲಿ ನೆಲೆಯಾಗುತ್ತದೆ. ವಿಚಾರ ಮತ್ತು ಅನುಭವಗಳೆರಡೂ ಒಂದಾಗಿ ನೆಲೆಗೊಂಡಾಗಲೇ ಎರಡಳಿದು ಒಂದಾಗುವುದು.

ಹೀಗೆ ಲಿಂಗಾಂಗ ಸಾಮರಸ್ಯವಾದಾಗ ಅಲ್ಲಿ ಸಮಾಧಾನ ನೆಲೆಗೊಂಡಿತ್ತೆಂಬ ಉದಾತ್ತ ಭಾವವನ್ನು ಅತಿ ಚಿಕ್ಕ ವಚನದಲ್ಲಿ ನೀಲಮ್ಮ ಹಿಡಿದಿಟ್ಟಿರುವುದನ್ನು ಗಮನಿಸಬಹುದು. ಇಲ್ಲಿ ಎರಡಿಲ್ಲದ ಅಂಗಗಳೊಂದಾದಾಗ ಅಂದರೆ, ಅಂಗ–ಲಿಂಗ, ಜೀವಾತ್ಮ–ಪರಮಾತ್ಮ, ಮತ್ತು ಕಾಯಕ–ದಾಸೋಹ, ವಿಚಾರ–ಅನುಭಾವ... ಹೀಗೆ ಎರಡಳಿದು ಒಂದಾದಾಗ ಅದೇ ಕುರುಹಿಲ್ಲದ ದೇವನ ಸ್ಥಲವಾಗಿರುತ್ತದೆ. ಹೀಗೆ ಸಾಧಿಸಿದ ಯಾರಾದರೂ ತಮ್ಮೊಳಗೇ ದೇವಸ್ಥಲವನ್ನು ಸೃಜಿಸಿಕೊಳ್ಳಬಹುದು. ಹಾಗಾದಾಗ ತಮ್ಮೊಳಗಣ ಲಿಂಗವೇ ತಮ್ಮನ್ನು ಮೆಚ್ಚಿ ಹೌದಹುದೆನ್ನಬಹುದು. ಇಂಥ ಅದೆಷ್ಟೋ ವಚನಗಳಲ್ಲಿ ನೀಲಮ್ಮ ಆಧ್ಯಾತ್ಮದ ಸತ್ಯವನ್ನಡಗಿಸಿಟ್ಟಿದ್ದಾಳೆ. ನಾವೆಲ್ಲಾ ಓದಿ ವಚಿಸಿ ಪಚಿಸಿಕೊಳ್ಳಬೇಕಷ್ಟೆ.

ತನ್ನ ಬದುಕಿನುದ್ದಗಲಕ್ಕೂ ಶರಣತ್ವವನ್ನೇ ಬದುಕಿ ಬಾಳಿ ತನ್ನನ್ನೇ ದಾಸೋಹಿಸಿಕೊಂಡ ಶರಣೆ ಈ ನೀಲಮ್ಮ. ಕಲ್ಯಾಣದ ಕ್ರಾಂತಿಯ ಅಂತ್ಯದಲ್ಲಿ ಬಸವಣ್ಣನೊಂದಿಗೆ ಕೂಡಲಸಂಗಮಕ್ಕೆ ತೆರಳದೇ ಭೌತಿಕ ವಚನಗಳ ರಕ್ಷಣೆಗಾಗಿ ತಂಡಗಳನ್ನಾಗಿ ರಚಿಸಿಕೊಂಡು ವಚನಗಳ ಕಟ್ಟಿನೊಂದಿಗೆ ಶರಣರೆಲ್ಲ ಒಂದೊಂದು ಕಡೆ ತೆರಳಿದಾಗ, ನೀಲಾಂಬಿಕೆ ಸಹ ವಚನಗಳ ರಕ್ಷಣೆಗೆ ಕೈಯಾಗುತ್ತಾಳೆ. ಬಸವಣ್ಣನವರು ತಮ್ಮ ಕೊನೆಯ ದಿನಗಳಲ್ಲಿ ನೀಲಮ್ಮನನ್ನು ಕರೆತರುವಂತೆ ತಮ್ಮಾಪ್ತ ಕಾರ್ಯದರ್ಶಿ ಹಡಪದ ಅಪ್ಪಣ್ಣನನ್ನು ನೀಲಮ್ಮ ಇರುವಲ್ಲಿಗೆ ಕಳುಹಿಸಿದಾಗ, "ನಾನು ಅಲ್ಲಿಗೇಕೆ ಬರಬೇಕು. ಅಲ್ಲಿರುವ ಸಂಗನೇ ಇಲ್ಲಿಲ್ಲವೇ?" ಎನ್ನುತ್ತಾಳೆ. ಬಸವಣ್ಣ ಭೌತಿಕವಾಗಿ ನನ್ನಿಂದ ದೂರವಿರಬಹುದು ಆದರೆ ಆತ ನನ್ನೊಂದಿಗೆ ವಿಚಾರಪತಿಯಾಗಿದ್ದಾನೆ. ಆತ ನನ್ನಾತ್ಮ ಸಂಗಾತಿ. ನಾನು ಇಲ್ಲಿದುಕೊಂಡೇ ಆತನ ನಡೆಯನ್ನು ನನ್ನ ನಡೆಯನ್ನಾಗಿಸಿಕೊಂಡು ಅನುಸರಿಸುತ್ತೇನೆಂದು ತಿಳಿಸುತ್ತಾಳೆ.

"ನೋಡು ನೋಡು ನೋಡು ನೋಡು ನೋಡು ಲಿಂಗವೇ, ನೋಡು ಬಸವಯ್ಯ ಮಾಡಿದಾಟವಾ. ಅಲ್ಲಿಗೆನ್ನನು ಬರ ಹೇಳಿದನಂತೆ, ಇಲ್ಲಿ ತಾವಿಲ್ಲವೇ ಸಂಗಯ್ಯನು ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು ಬಲ್ಲ ಮಹಾತ್ಮರಿಗಿದು ಗುಣವೇ?" ಎನ್ನುತ್ತಾಳೆ. ಈ ಸಂದರ್ಭದಲ್ಲಿ ಅಪ್ಪಣ್ಣ ಸಹ ಬೆರಗಾಗುತ್ತಾನೆ. ನೀಲಮ್ಮನ ವಿಚಾರಕ್ಕೆ ತಲೆಬಾಗುತ್ತಾನೆ.

ದೇವನನ್ನು ಕಾಣಲು ಆತನಿರುವನೆಂದು ನಂಬಿರುವ ಕಲ್ಲು, ಮಣ್ಣು, ಕಟ್ಟಿಗೆಗಳ ಮೂರ್ತಿಯತ್ತ ತೆರಳಬೇಕಾದ ಅವಶ್ಯಕತೆ ಇಲ್ಲ; ನಮ್ಮೊಳಗೇ ಇದ್ದಾನೆ, ಸಕಲ ಜೀವಿಗಳಲ್ಲಿದ್ದಾನೆ. ಅಂಥಲ್ಲಿಯೇ ದೇವನನ್ನು ಕಾಣಬೇಕೆನ್ನುವ ಬಹುದೊಡ್ಡ ಪರಿಕಲ್ಪನೆಯೂ ಇಲ್ಲಡಗಿದೆ.

ಹೀಗೆ, "ಸಂಗಮನಾಥನನ್ನು ಹುಡುಕಿಕೊಂಡು ಕಪ್ಪಡಿಗೆ ಹೋಗಬೇಕೇಕೆ? ನನ್ನ ಕರದ ಇಷ್ಟಲಿಂಗದಲ್ಲಿಯೇ ಸಂಗಮನಾಥನಿರುವನಲ್ಲವೇ?" ಇಲ್ಲಿರುವ ಸಂಗನೇ ಅಲ್ಲಿರುವನು ಎಂದು ಹೇಳುತ್ತಲೇ ನೀಲಾಂಬಿಕೆ ತನ್ನ ಇಷ್ಟಲಿಂಗವನ್ನು ಕರದಲ್ಲಿಡಿದು ಇಷ್ಟಲಿಂಗದಲ್ಲಿ ಉಸಿರು ಮತ್ತು ದೃಷ್ಟಿಯನ್ನು ಕೇಂದ್ರೀಕರಿಸಿ, ಶ್ವಾಸೋಚ್ಛ್ವಾಸಗಳ ನಿಲುಗಡೆಗೊಳಿಸಿ, ಬಯಲಲ್ಲಿ ಬಯಲಾಗಿಬಿಡುತ್ತಾಳೆ! ಶರಣರಿಗೆ ಮರಣವೇ ಮಹಾನವಮಿ ಎನ್ನುವಂತೆ ವಿಶಿಷ್ಟ ಬಗೆಯಲ್ಲಿ ನೀಲಮ್ಮ ಲಿಂಗೈಕ್ಯಳಾಗುತ್ತಾಳೆ. ನನ್ನ ಪ್ರಕಾರ ಇಂಥ ಶರಣರು ಲಿಂಗೈಕ್ಯವಾದರು ಎನ್ನುವುದಕ್ಕಿಂತ ಜಂಗಮೈಕ್ಯವಾದರು ಎನ್ನುವುದು ಸೂಕ್ತವೇನೋ. ಏಕೆಂದರೆ ಜಂಗಮದಲ್ಲಿಯೂ ಇವರ ಲಿಂಗ ಸಾಕಾರವಾಗಿ ಹೌದಹುದೆನ್ನುವಂತಿರುತ್ತದೆ.

ಈ ಬಗೆಯ ವಿಚಾರಪರ ನಿಲುವು ನೀಲಮ್ಮನನ್ನು ಆಧ್ಯಾತ್ಮದ ಉನ್ನತಿಗೇರಿಸಿದೆ. ಭೌತಿಕ ಸಾಮಿಪ್ಯಕ್ಕಿಂತ ಆಂತರ್ಯದ ಸಾಮಿಪ್ಯಕ್ಕೆ ಮಹತ್ವ ಕೊಟ್ಟಿದ್ದ ನೀಲಮ್ಮನ ಸ್ಥಿತಪ್ರಜ್ಞೆಯ ಸ್ಥಿತಿ ಮತ್ತು ನಿರಾಕಾರದಲ್ಲಿಯೇ ಸಾಕಾರವನ್ನ ಕಾಣುವ ವಿಶಿಷ್ಠ ಬಗೆಯ ಅರಿವನ್ನು ಹೊಂದಿದ್ದ ಜ್ಞಾನಿಯಾಗಿದ್ದಳು. "ಆದ್ಯಾತ್ಮಿಕ ಮಿಲನ ನಿರಂತರವಾಗಿದ್ದಾಗ, ಭೌತಿಕ ಮಿಲನ ಅನಗತ್ಯ" ಎಂಬ ನೀಲಮ್ಮನ ಧೋರಣೆ ದೇವನ ವಾಸ್ತವಿಕ ಪರಿಕಲ್ಪನೆಯನ್ನು ಬಿಂಬಿಸಿತ್ತು. "ಶರಣ ಲೋಕಕ್ಕೆ ಮರುಳು, ಶರಣನಿಗೆ ಲೋಕ ಮರುಳು" ಎಂಬ ನಿಲುವಿಗೆ ಅಂಟಿಕೊಂಡಿದ್ದ ನೀಲಮ್ಮ ತನ್ನಾಂತರ್ಯದಲ್ಲಿ ಅದ್ಭುತವನ್ನು ಕಂಡುಕೊಂಡಿದ್ದಳು. ಭೌತಿಕವಾಗಿ ದೇವನನ್ನು ಕಾಣುವ ಬಗೆಯ ಕುರಿತು 'ಕಣ್ಣು ಕಂಡಲ್ಲಿ ಮನ ನಿಲ್ಲದು' ಎಂಬ ವಿಚಾರ ನೀಲಮ್ಮನದ್ದು, ನಿರಾಕಾರ ದೇವನನ್ನು ಸಾಕಾರ ರೂಪದಲ್ಲಿ ನಾನು ಕಂಡೆನೆಂದು ಬೀಗುವವರನ್ನು ಬಯಲೊಳಗಿಟ್ಟು ಪ್ರಶ್ನಿಸಿಬಿಡುವಂಥ ಧೋರಣೆ ನೀಲಮ್ಮನದ್ದು.

ಇಂದಿನ ವಿಜಯಪುರ ಜಿಲ್ಲೆಯ ಮುದ್ದೆಬಿಹಾಳ ತಾಲ್ಲೂಕಿನ ತಂಗಡಗಿಯಲ್ಲಿ ನೀಲಮ್ಮ ಕೊನೆಯ ಕೆಲ ದಿನಗಳು ತಂಗಿದ್ದ ಕಾರಣ, ಈ ಸ್ಥಳಕ್ಕೆ ತಂಗಡಗಿ ಎಂದು ಹೆಸರು ಬಂದಿರಬಹುದು. ತಂಗಡಗಿಯಲ್ಲಿ ಹಾಗೆ ತಿರುಗಾಡುತ್ತಿದ್ದಲ್ಲಿ ನೀಲಮ್ಮ ಮತ್ತು ಹಡಪದ ಅಪ್ಪಣ್ಣನನ್ನು ನೆನಪಿಸುವಂಥ ಸ್ಥಾವರ ಸ್ಮಾರಕಗಳಿವೆ. ಅವರ ಐಕ್ಯ ಸ್ಥಳ, ಕಟ್ಟೆ, ಗುಡಿ ಮತ್ತು ಶಿಲಾಮೂರ್ತಿಗಳು ಇಂದಿಗೂ ನೋಡಲು ಲಭ್ಯ. ಅಲ್ಲಿ ತಿರುಗಾಡುತ್ತಿದ್ದ ನನಗೆ ಇವೆಲ್ಲ ಸ್ಥಾವರಗಳಾಗಿ ಕಾಣಲಿಲ್ಲ. ಅಲ್ಲಿ ನೀಲಮ್ಮನ ಲಿಂಗದುಸಿರು, ಅಪ್ಪಣ್ಣನ ನಿಟ್ಟುಸಿರ ಬಿಸಿ ಮೈಸೋಕುವ ಮೂಲಕ ಇವೆಲ್ಲ ಸ್ಥಾವರಗಳೆನಗೆ ಜಂಗಮವಾಗಿ ಸ್ಪರ್ಷಿಸಿದವು. ಶರಣರೊಂದಿಗಿದ್ದ ಇಂಥ ಸ್ಥಳಗಳೊಂದಿಗೆ ನಾವಿದ್ದೀವಲ್ಲವೆಂಬುದೇ ನಮ್ಮ ಸಾರ್ಥಕತೆಯಾಗಿದೆ. ಅವರಾಶಯದ ನಡೆಯ ನುಡಿಯನ್ನು ನಮ್ಮ ನಡೆಯಾಗಿಸಿಕೊಳ್ಳುವ ಮೂಲಕ ನಮ್ಮ ನಡೆಯ ಮೆಚ್ಚಿ ನಮ್ಮೊಳಗಿನ ಲಿಂಗ ಹೌದಹುದೆನ್ನುವಂತೆ ಬದುಕೋಣ.

●



## ಒಂದು ವಚನ ~ ಎರಡು ನೋಟ

ಡಾ. ಎ. ರಘುರಾಂ ಅವರು ಪ್ರಸ್ತುತ ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯದಲ್ಲಿ ಕನ್ನಡ ಸಹ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸಾಹಿತ್ಯ, ವಿಮರ್ಶೆ ಮತ್ತು ಸಾಮಾಜಿಕ ಅಧ್ಯಯನಗಳು ಇವರ ಪ್ರಧಾನ ಆಸಕ್ತಿಯ ಕ್ಷೇತ್ರಗಳು. ಇತ್ತೀಚೆಗಷ್ಟೇ ಇವರು ತಮ್ಮ ಪಿಹೆಚ್.ಡಿ. ಪ್ರೌಢ ಪ್ರಬಂಧವನ್ನು ಪ್ರಕಟಿಸಿದ್ದಾರೆ. ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅನಿಕೇತನ ಪತ್ರಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ.

ಶ್ರೀಮತಿ ಸವಿತಾ ನುಗಡೋಣಿ ಅವರು ಪ್ರಖ್ಯಾತ ಹಿಂದೂಸ್ಥಾನಿ ಗಾಯಕರು. ಸೂಕ್ಷ್ಮ ಸಂವೇದನೆಯ ಕವಿಹೃದಯದ ಹಾಡುಗಾರ್ತಿ ಇವರು. ಆದ್ದರಿಂದಲೇ ಇವರ ವಚನಗಳ ಗಾಯನವು ಗಾನಾಮೃತವೂ, ಕಾವ್ಯಾಮೃತವೂ ಎರಡೂ ಆಗಿರುತ್ತದೆ ಸಾಹಿತ್ಯದ ಗಂಭೀರ ವಿದ್ಯಾರ್ಥಿಯೂ ಆಗಿರುವ ಸವಿತಾ ನುಗಡೋಣಿ ಅವರು ನಾಡಿನಾದ್ಯಂತ ಸಂಗೀತ ಕಛೇರಿಗಳನ್ನು ನೀಡಿದ್ದಾರೆ.

ಹಳದಿಯ ಸೀರೆಯನುಟ್ಟು
ಬಳಹದೋಲೆಯ ಕಿವಿಯಲಿಕ್ಕಿ
ಮೊಳಡಂಗೆಯ ಪಿಡಿದು ಗುಲಗಂಜಿ ದಂಡೆಯ ಕಟ್ಟಿ
ತುತ್ತುರುತುರು ಎಂಬ ಕೊಳಲ ಬಾರಿಸುತ
ಅಪಳ ಚಪಳನೆಂಬ ಉಲಿವ ಗಂಟೆಯ ಕಟ್ಟಿ
ತುತ್ತುರು ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ
ಕಾವ ನಮ್ಮ ಶಂಭು ತೆಲುಗೇಶ್ವರನು ಮನೆಯ ಗೋವಳನೀತ.

– ತೆಲುಗೇಶ್ವರ

## ದೇವನೊಬ್ಬನೇ...

ಡಾ. ಎ. ರಘುರಾಂ

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ,
ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯ,
ಶೇಷಾದ್ರಿ ರಸ್ತೆ, ಬೆಂಗಳೂರು ೫೬೦ ೦೦೧
ಮೊ : ೯೪೪೯೭೭೯೨೧೭

ಹನ್ನೆರಡನೆಯ ಶತಮಾನದ ವಚನಕಾರರ ದೃಷ್ಟಿ ಧೋರಣೆಗಳೇ ಭಿನ್ನ. ಇಡೀ ವಚನ ಚಳುವಳಿಯ ಕ್ರಿಯಾಶಕ್ತಿ ಒಂದಾಗಿದ್ದರೆ, ಅಂತರಂಗದ ಸತ್ಯವನ್ನು ಒಬ್ಬರಿಗಿಂತ ಮತ್ತೊಬ್ಬರು ಭಿನ್ನವಾಗಿ ಹೇಳುವುದನ್ನು ನೋಡುತ್ತೇವೆ. ಇದು ವಚನ ಚಳವಳಿಯ

ಸೋಪಜ್ಞತೆಯನ್ನೂ, ಕ್ರಿಯಾಶೀಲತೆಯನ್ನೂ ತೋರುತ್ತದೆ. ಮಸಣಯ್ಯನು ಮೂಲತ: ತೆಲುಗುನಾಡಿನವನಾದ ಕಾರಣ ಅಲ್ಲಿನ ಭಾಷೆ, ಸಂಸ್ಕೃತಿ ಹಾಗೂ ಅದರೊಟ್ಟಿನ ಸಂಬಂಧಗಳನ್ನು ಗಮನಿಸಿ ಮಾತನಾಡುವುದನ್ನು ನೋಡುತ್ತೇವೆ. ಅಕ್ಕಮಹಾದೇವಿ ಬಹಿರಂಗದಲ್ಲಿ ಹೆಣ್ಣೆಂಬ ಕಾರಣಕ್ಕಾಗಿ ಈ ಸಮಾಜ ಆಕೆಯನ್ನು ನೋಡುವ ಬಗೆಯನ್ನು ಹೇಳುತ್ತಿದ್ದರೂ, ಅಂತರಂಗದಲ್ಲಿ ತಾನು ಅನುಭವಿಸುವ ಯಾತನೆಗಳಿಗೆ ಈ ಸಮುದಾಯ ಹೇಗೆಲ್ಲ ಕಾರಣವಾಗಿದೆ ಎನ್ನುವ ವಿಚಾರವನ್ನೇ ಹೇಳುತ್ತಿರುತ್ತಾಳೆ. ಈ ಕಾರಣದಿಂದಲೇ ವಚನ ಚಳವಳಿಯ ಒಟ್ಟು ಕ್ರಿಯಾಶಕ್ತಿ ಒಂದಾಗಿದ್ದರೆ, ಒಬ್ಬೊಬ್ಬ ವಚನಕಾರರ ಧೋರಣೆಯೂ ವಿಭಿನ್ನವಾಗಿದೆ. ಇದಕ್ಕೆ ಉದಾಹರಣೆಯಾಗಿ ಮಾತ್ರ ಅಕ್ಕನನ್ನು ಪ್ರಸ್ತಾಪಿಸಿದೆ.

ಮಸಣಯ್ಯನ ಶಬ್ದ ಪ್ರಮಾಣಗಳು ಹೇಗೆಲ್ಲ ನಮ್ಮ ನಡುವೆ ನಮ್ಮನ್ನು ದಿಕ್ಕೆಡಿಸಿವೆ ಎನ್ನುವುದನ್ನು ಹೇಳುವುದರ ಜೊತೆಗೆ ಸಾಂಕೇತಿಕತೆಯ ಮೂಲಕ ಸೂಕ್ಷ್ಮವಾಗಿ ಗುರುತಿಸುತ್ತಾನೆ. ಮನುಷ್ಯ ಜಿತೇಂದ್ರಿಯತ್ವಕ್ಕಾಗಿ ಏನೆಲ್ಲ ಮಾಡುತ್ತಿರುತ್ತಾನೆ ಎನ್ನುವ ವಿಚಾರವನ್ನು ಕೆಲವು ಗೂಢಾರ್ಥಗಳ ಮೂಲಕ ನಮ್ಮ ಮುಂದಿಡುತ್ತಿದ್ದಾನೆ.

ಪೀತಾಂಬರವನ್ನುಟ್ಟು, ಬಳಪದ ಕಲ್ಲಿನೋಲೆಯ ಧರಿಸಿ, ಮೊಳ ಅಳತೆಯ ಬಡಿಕೋಲನ್ನು ಹಿಡಿದು, ಕಾಡಿನಲ್ಲಿರುವ ಗುಲಗಂಜಿ ಮಾಲೆ ಕಟ್ಟಿ, ಕೊಳಲನೂದುತ್ತ, ಅಪಳ-ಚಪಳ ಎಂಬ ಗಂಟೆಯನ್ನು ಕಟ್ಟಿ ತುತ್ತಿಗಾಗಿ ಗಮನಕೊಟ್ಟು ಜನರ ಲೋಕದಲ್ಲಿ ಈಗಾಗಲೇ ಇರುವ ದೈಗಳನೆಲ್ಲವನು ಒಂದು ಮಾಡಿ ಅಥವಾ ಹಿಸುಕಿ ದ್ರವವನ್ನು ತೆಗೆದ ಹಾಗೆ ಏಕ ದೇವೋಪಾಸನೆಯ ಪ್ರತೀಕವಾದ ಶಂಭು ತೆಲುಗೇಶ್ವರನು ಇದ್ದಾನೆ, ಆತನೇ ಗೋವಳ ಎನ್ನುತ್ತಿದ್ದಾನೆ. ಇದು ಮೇಲ್ಪದರದ ಅರ್ಥವನ್ನು ಹೇಳುತ್ತಿದ್ದರೂ ಅಂತರಂಗದ ಸತ್ವ ಬೇರೆಯದೇ ಎನ್ನಿಸಿಬಿಡುತ್ತದೆ. ಭಾಷಿಕ ರಚನೆಯ ಮೇಲ್ಪದರದಲ್ಲಿರುವ ಅರ್ಥವನ್ನು ಕೆಲವು ಶಬ್ದಗಳ ಮೂಲಕ ಮತ್ತೆ ಮತ್ತೆ ಮರುಪರಿಶೀಲನೆಗೆ ಒಳಗುಮಾಡಿದರೆ ಇಲ್ಲಿನ ಗೂಢಾರ್ಥ ತಿಳಿಯಬಹುದು ಎನ್ನುವ ಸೂಕ್ಷ್ಮತೆಯನ್ನು ನಿಮ್ಮೆದುರಿಗೆ ಇಡುತ್ತಾ ಹೊಳೆದ ಅರ್ಥವನ್ನು ಹೀಗೆ ಸಂಗ್ರಹಿಸಬಹುದು. ಮೊದಲ ಸಾಲಿನಲ್ಲಿ ಪೀತಾಂಬರ ಧರಿಸಿ, ಬಳಪದ ಕಲ್ಲಿನೋಲೆ ಧರಿಸಿದವನಾಗಿ ಕಾಣುತ್ತಾನೆ. ಆದರೆ ಮೂರನೆಯ ಸಾಲಿಗೆ ಬರುವ ವೇಳೆಗೆ ಅರ್ಥಗ್ರಹಣ ಕಷ್ಟವಾಗಿ ಹೇಗೆ ಗ್ರಹಿಸಿದರೆ ಸರಿ ಅರ್ಥ ಪ್ರಾಪ್ತವಾಗಬಹುದು ಎನ್ನುವ ಜಿಜ್ಞಾಸೆಗೆ ಒಳಗಾಗುತ್ತೇವೆ. ಇದು ನನ್ನ ಮಿತಿಯೂ ಇರಬಹುದು. ಆದರೆ ಇಲ್ಲಿ ಎರಡು ಅರ್ಥಗಳನ್ನು ಕಾಣಬಹುದು. ಒಂದು 'ಮೊಳಡಂಗೆ' ಎಂದರೆ ಅಚ್ಚುಕಲ್ಲನ್ನು ಹಿಡಿದು ಅದರ ಆಕಾರಕ್ಕೆ ತಕ್ಕನಾಗಿ ನಾವು ಏನನ್ನು ಬೇಕಾದರೂ ಮಾಡಿಕೊಳ್ಳಬಹುದು ಎನ್ನುವ ಅರ್ಥ ಇದ್ದರೆ, 'ಮೊಳಡಂಗೆ' ಎಂದರೆ ಮೊಳ ಅಳತೆಯ ದೊಣ್ಣೆ. ಇದನ್ನು ದನಗಳ ಕೊರಳಿಗೆ ನಿಯಂತ್ರಣಕ್ಕಾಗಿ ಕಟ್ಟುವ ಸಾಧನವಾಗಿದೆ. ಒಂದು ಶಂಖಾಕೃತಿಯು, ಅದರಿಂದ ಮೊಳಗಬಹುದಾದ ಒಂದು ಮೊಳಗೇ? ಎಂಬ ಅನುಮಾನವೂ ಇಲ್ಲಿ ಕಾಡುತ್ತದೆ. ಇಲ್ಲಿ ತೆಲ್ಲಿಗರ ಸಂಸ್ಕೃತಿಯ ಹಿನ್ನೆಲೆಯಲ್ಲಿ ಮಾತನಾಡುತಿದ್ದಾನೆಯೇ, ಅವರು ಜೋಡಿಸಿದ ಅಚ್ಚಿನಲ್ಲಿ ಗುಲಗಂಜಿ ಬಳ್ಳಿಯಲ್ಲಿ ನೀರು ಸಂಗ್ರಹಿಸಿ ಅದರಲ್ಲಿ ಇವುಗಳನ್ನು ಇಡುವ, ಸಂರಕ್ಷಿಸುವ ವಿಚಾರವೇನಾದರೂ ಇರಬಹುದೇ? ಎನ್ನುವುದನ್ನೂ ನೋಡಬೇಕು. ಏಕೆಂದರೆ



ತೆಲ್ಲಿಗರು ಅಂದರೆ ಗಾಣಿಗರು ಸ್ಥಾಪಿಸಿದ ದೈವ ತೆಲ್ಲಿಗೇಶ್ವರ. ಅದು ರೂಢಿಯಲ್ಲಿ ತೆಲುಗೇಶ್ವರ ಆಗಿರುವ ಸಾಧ್ಯತೆಗಳನ್ನು ತಳ್ಳಿಹಾಕಲಾಗದು. ಏಕೆಂದರೆ ಶಂಭು, ತೆಲುಗೇಶ ಎಂಬ ಎರಡು ಶಬ್ದಗಳು ಶೈವ ಸಂಸ್ಕೃತಿಯನ್ನು ಪ್ರತಿನಿಧಿಸಿದರೆ, ಕೊಳಲ ಬಾರಿಸು ಎನ್ನುವ ಶಬ್ದ ಕೃಷ್ಣನ ಪ್ರತಿನಿಧೀಕರಣದ ಸಾಲಾಗಿ ಕಾಣುತ್ತದೆ. ಹೀಗಾಗಿ ಶೈವ ಬ್ರಾಹ್ಮಣ ಸಂಸ್ಕೃತಿಯನ್ನೂ ಇಲ್ಲಿ ಹೇಳಲಾಗುತ್ತಿದೆಯೆ? ಎನ್ನುವುದನ್ನೂ ಒಟ್ಟಿಗೇ ಪರಿಶೀಲಿಸಬೇಕಾಗುತ್ತದೆ. ಎಲ್ಲಾ ದೈವಗಳನ್ನು ಹಿಂಡು ಮಾಡುವ ಕ್ರಿಯೆ ಏನನ್ನು ಸೂಚಿಸುತ್ತಿದೆ ಎಂದರೆ, 'ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ ಕಾವ ನಮ್ಮ ಶಂಭು ತೆಲುಗೇಶ್ವರನು ಮನೆಯ ಗೋವಳನೀತ' ಎನ್ನುತ್ತಿದ್ದಾನೆ. ಗೋವಳ ಎಂದರೆ ದನಗಾಹಿ ಅಂದರೆ ಶಿವನನ್ನು ಮೇಲ್ಪಂಕ್ತಿಯಲ್ಲಿರಿಸಿದರೂ ಒಳಗೆ ಗೋಪಾಲಕ ಕೊಳಲನೂದಿದ ತಕ್ಷಣ ಎಲ್ಲ ದನಗಳೂ ಬಂದು ನಿಲ್ಲುವಂತೆ ಕ್ರಿಯಾಚೈತನ್ಯವಾಗಿ ತೆಲುಗೇಶ್ವರ ಕಾಣುತ್ತಿದ್ದಾನೆ. ಅಪಳ ಚಪಳ ಎನ್ನುವುದು ಮನುಷ್ಯ ಸ್ವಭಾವದ ಚಂಚಲತೆಯನ್ನು ಹೇಳುತ್ತಿದ್ದರೆ (ಅಪಳ-ಚಪಳ ಹಗಲು ರಾತ್ರಿಯನ್ನು ಹೇಳುತ್ತಿರಬಹುದೇ? ಕಾಲವನ್ನು ಗಂಟೆ ಪ್ರತಿನಿಧಿಸುತ್ತಿದೆಯೇ?) ಗುಲಗಂಜಿ ಎರಡು ಬಣ್ಣಗಳನ್ನು ಪ್ರತಿನಿಧಿಸುತ್ತಿದೆ. ಒಂದು ಕಪ್ಪು, ಇನ್ನೊಂದು ಕೆಂಪು. ಕಪ್ಪು ಅಜ್ಞಾನ, ಕತ್ತಲನ್ನೂ, ಕೆಂಪು ಹೊಳಪು, ಬೆಳಗು, ಜ್ಞಾನವನ್ನೂ ಸಂಕೇತಿಸುತ್ತಿರಬಹುದೇ? ಕಪ್ಪು ಶಿವನನ್ನೂ, ಕೆಂಪು ಕೃಷ್ಣನ ದಿವ್ಯ ಪ್ರೇಮದ ಅನುರಾಗವನ್ನು ಪ್ರತಿನಿಧಿಸುತ್ತಿರಬಹುದೇ? ಚಂಚಲತೆಯನ್ನು ಬಿಟ್ಟು, ಹಲವು ದೈವಂಗಳ ಬಿಟ್ಟು ತೆಲುಗೇಶನಲ್ಲಿ ಎಲ್ಲವನ್ನೂ ಕಾಣಿರಿ ಎಂದು ಹೇಳುತ್ತಿದ್ದಾನೆ. ದನಗಳನ್ನು ಮೇಯಿಸಲು ಹೋಗುವ ಹುಡುಗನೊಬ್ಬ ಕೃಷ್ಣ ವೇಷಧಾರಿಯಾಗಿ ಕೊಳಲನ್ನು ಹಿಡಿದು ಕಾಡಿಗೆ ದನ ಮೇಯಿಸಲು ಹೋದ ಚಿತ್ರವಾಗಿರಬಹುದೇ? ಗಾಣಿಗ ವೃತ್ತಿಯಲ್ಲಿದ್ದ ಜನ ತಮ್ಮ ಜೀವನ ನಡೆಸಲು ಒಂದು ದನವನ್ನು ಸಿಂಗರಿಸಿದ ಬಗೆಯೂ ಇದಾಗಿರಬಹುದು. ಅವನಿಗೆ ಆ ದನವಿರದಿದ್ದರೆ ಅನ್ನವೇ ಇಲ್ಲ. ಹೀಗಾಗಿ ಅದು ದೈವವೂ ಆಗಿ ಕಾಣುತ್ತಿದೆ. ಇದು ಒಂದು ವಿಶಿಷ್ಟ ವಚನವಾಗಿರುವ ಕಾರಣದಿಂದ ಸಂಕೇತಗಳನ್ನಿರಿಸಿ ಅದರಾಚೆ ದಾಟುವ ಕ್ರಿಯೆಯನ್ನು ಹೇಳುತ್ತಿರಬಹುದೇ? ಅಧ್ಯಾತ್ಮ ಹಾಗೂ ಸಂಸ್ಕೃತಿ ಎರಡನ್ನೂ ಒಟ್ಟಿಗೆ ಇಟ್ಟು ಶೈವ ಧರ್ಮದಲ್ಲಿ ನೋಡುವ ವಿಶಿಷ್ಟ ಕ್ರಮ ಇಲ್ಲಿದೆ ಎಂದು ನನಗನ್ನಿಸುತ್ತಿದೆ.

## ಅನ್ಯದೈವಕ್ಕೆಳಸಿದವರು ಭಕ್ತರಲ್ಲ

**ಸವಿತಾ ನುಗಡೋಣಿ**

'ಸೂರು', ಎಂ.ಪಿ. ಪ್ರಕಾಶ ನಗರ
ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ - ೫೮೩ ೨೦೧ ಬಳ್ಳಾರಿ ಜಿಲ್ಲೆ
ಮೊ: ೯೪೪೯೧ ೩೩೯೩೬

ವಚನ ಓದುವವರಿಗೆ ವಚನಕಾರರ ತತ್ವಗಳು ಏನು ಎಂಬುದು ಗೊತ್ತಿರುತ್ತದೆ ವಚನಕಾರರು ಇಷ್ಟಲಿಂಗ ಪೂಜಕರು. ಈ ಲಿಂಗವನ್ನೇ ಪೂಜಿಸುವ, ದೈವ ಎಂದು ವಿಶ್ವಾಸ ಉಳ್ಳವರು. ಬೇರೆ ದೇವರು-ದೈವಗಳನ್ನು ಪೂಜಿಸುವುದಿಲ್ಲ ದೈವ ಎಂದು ಭಾವಿಸುವುದಿಲ್ಲ. ಹಾಗೇನಾದರೂ ಇಷ್ಟಲಿಂಗದ ಬದಲಾಗಿ ಅಥವಾ ಸಮಯಾನುಸಾರ

ಬೇರೆ ದೇವರು, ದೈವಗಳನ್ನು ಮೆಚ್ಚಿ, ಇಷ್ಟಪಟ್ಟು ಪೂಜಿಸಲು ತೊಡಗಿದರೆ ಅಂಥವರನ್ನು ಭಕ್ತರಲ್ಲ ಎಂದು ನಿಷ್ಠೂರವಾಗಿ ಕರೆಯುವ ಪದ್ಧತಿ ಇದೆ. ಈ ವಚನದಲ್ಲಿ ಈ ಭಾವ ಕಾಣುತ್ತದೆ.

ಬೇರೆ ಹೆಸರುಗಳ ದೈವಗಳನ್ನು ಪೂಜಾರರು ತಾವು ಸಿಂಗಾರ ಮಾಡಿಕೊಂಡು, ದೈವಗಳನ್ನು ಸಿಂಗಾರ ಮಾಡಿ ಮೆರೆಸಿದರೆ, ಅಂಥ ಪೂಜಾರಿ–ದೈವಗಳನ್ನು ಶಂಭು ತೆಲುಗೇಶ್ವರನು ನೋಡಿಕೊಳ್ಳುತ್ತಾನೆ. ಅಂದರೆ ಅಂತಹ ದೈವಗಳನ್ನು ಹೇಗೆ ಕಾಯ್ಬೇಕು ಎಂಬುದನ್ನು ಬಲ್ಲನೆಂದು ಈ ವಚನ ಹೇಳುತ್ತದೆ.

ಶರಣರಾದವರು ತಮ್ಮ ಇಷ್ಟಲಿಂಗವನ್ನೇ ದೈವವೆಂದು ಅಚಲ ವಿಶ್ವಾಸ ಹೊಂದಿರಬೇಕು. ಬೇರೆ ಸೆಳೆತದಿಂದ ಪರರ ದೈವಗಳಿಗೆ ಮನಸೋತರೆ ಶಂಭು ತೆಲುಗೇಶ್ವರ ಮನ್ನಿಸುವುದಿಲ್ಲ ಎಂದು ಈ ವಚನ ತಿಳಿಸುತ್ತದೆ.

ಏಕದೇವೋಪಾಸನೆಯನ್ನು ಕುರಿತ ವಚನಕಾರರ ಪ್ರತಿಪಾದನೆಗೆ ಹಲವು ಮುಖಗಳಿವೆ. ಬಹುದೈವದ ಪದ್ಧತಿಯು ಭಾರತದ ಧಾರ್ಮಿಕ ವ್ಯವಸ್ಥೆಯಲ್ಲಿ ಶೋಷಣೆಗೋ ಹಲವು ಬಗೆಯ ತರತಮಗಳಿಗೋ ಅವಕಾಶ ಮಾಡಿಕೊಟ್ಟಿತ್ತು. ಇದರ ಜೊತೆಗೆ ವಚನಕಾರರು ಹಿಂದೆಂದೂ ಇಲ್ಲದ ಇಷ್ಟದೈವದ ಪರಿಕಲ್ಪನೆಯನ್ನು ಜಾರಿಗೆ ತಂದರು. ಈ ಮೂಲಕ ಧಾರ್ಮಿಕ ವ್ಯವಸ್ಥೆಯ ಬಹುದೊಡ್ಡ ಸವಾಲೊಂದಕ್ಕೆ ಉತ್ತರವನ್ನೂ ಕಂಡುಕೊಂಡರು ಮತ್ತು ದೈವ – ಭಕ್ತಿ – ಭಕ್ತ ಇವರ ನಡುವಿನ ಅಂತರವನ್ನು, ಕೃತಕತೆಯನ್ನು ಕಳೆಯುತ್ತಾ ಈ ಮೂರನ್ನೂ ಒಂದುಗೂಡಿಸುವ ಪ್ರಯತ್ನದಲ್ಲಿ ಅವರು ತೊಡಗಿದ್ದರು. ಈ ವಚನವು ವಚನಕಾರರ ಈ ನಿಲುವಿನ ಪ್ರತಿಪಾದನೆಯೂ ಆಗಿದೆ.

●

ಊರ್ವಸಿ ಕರ್ಪೂರವ ತಿಂದು
ಎಲ್ಲರಿಗೆ ಮುತ್ತ ಕೊಟ್ಟಡೆ ಮಚ್ಚುವರಲ್ಲದೆ
ಹಂದಿ ಕರ್ಪೂರವ ತಿಂದು
ಎಲ್ಲರಿಗೆ ಮುತ್ತ ಕೊಟ್ಟಡೆ ಮಚ್ಚುವರೆ
ಹುಡುಹುಡು ಎಂದಟ್ಟುವರಲ್ಲದೆ
ನಡೆನುಡಿ ಶುದ್ಧವುಳ್ಳವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರಲ್ಲದೆ
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರೆ
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿಡೆ
ಆ ಹಂದಿಗಿಂತ ಕರಕಷ್ಟ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ



# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಡಾ. ಶುಭಾ ಮರವಂತೆ**

ಮುಖ್ಯಸ್ಥರು ಕನ್ನಡ ವಿಭಾಗ
ಸಹ್ಯಾದ್ರಿ ವಾಣಿಜ್ಯ ಕಾಲೇಜು
ಶಿವಮೊಗ್ಗ ೫೭೭ ೨೦೩
ಮೊ:೯೪೪೮೫೬೦೧೧೮

ಡಾ. ಶುಭಾ ಮರವಂತೆ ಅವರು ಪ್ರವರ್ಧಮಾನಕ್ಕೆ ಬರುತ್ತಿರುವ ಭರವಸೆಯ ಲೇಖಕಿ. ಪ್ರಸ್ತುತ ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅತ್ಯುತ್ತಮ ವಾಗ್ಮಿಯೂ ಆಗಿರುವ ಇವರು ನಾಡಿನಾದ್ಯಂತ ಅನೇಕ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದಾರೆ. ತಮ್ಮ ನೇರ, ನಿಷ್ಠುರ, ನೋಟ, ನಿಲುವುಗಳಿಗೆ ಇವರು ಖ್ಯಾತರು.

**೧. ಶರಣ ಚಳುವಳಿಯ ಹಿನ್ನೆಲೆಯನ್ನು ನೀವು ಗ್ರಹಿಸುವ ಮತ್ತು ಅರ್ಥೈಸುವ ಬಗೆಯನ್ನು ಕುರಿತು ಹೇಳಿ**

**ಉತ್ತರ:** ಹನ್ನೆರಡನೆ ಶತಮಾನದಲ್ಲಿ ಶರಣರು ಮಾಡಿದ ಕ್ರಾಂತಿಯನ್ನು 'ಚಳುವಳಿ' ಎಂದು ಗುರುತಿಸುವುದಾದರೆ ಅದು ನಿಶ್ಚಯವಾಗಿಯೂ ಕಾಯಕ ಜೀವಿಗಳ ಅಸ್ಮಿತೆಯ ದಾಖಲೆಯಾಗಿ ಗ್ರಹಿಸುವುದು ಮುಖ್ಯ. ಇತಿಹಾಸದಲ್ಲಿ ಮೊತ್ತ ಮೊದಲ ಬಾರಿಗೆ ದುಡಿಮೆಯ ಪರಿಕಲ್ಪನೆಯನ್ನು ಅಧ್ಯಾತ್ಮದ ಪರಿವೇಶದಲ್ಲಿ ನಿರ್ವಚಿಸಿದ ಶರಣರ ನಿಲುವು ನನಗೆ ವಿಶೇಷವೆನಿಸುತ್ತದೆ. ಕಾಲದ ತುರ್ತು ಮತ್ತು ಅಗತ್ಯವನ್ನು ಹಿನ್ನಲೆಯಾಗಿಟ್ಟುಕೊಂಡರೆ ಕ್ಷಾತ್ರಯುಗದ ತುಸು ಹಿಂದಿನ ಆದರ್ಶಗಳನ್ನು ಬಯಲು ಮಾಡಿ ಯುದ್ಧ, ಹಿಂಸೆ, ಸ್ವರ್ಗ–ನರಕಗಳ ಪರಿಕಲ್ಪನೆಯ ಬದಲಿಗೆ ಶರಣರಿಗೆ ಕಾಯಕ ಸಿದ್ಧಾಂತವನ್ನು ಹೊಸದಾಗಿ ಮುಂಚಾಚುವುದು ಅಷ್ಟು ಸುಲಭದ ಸಾಧನೆಯಾಗಿರಲಿಲ್ಲ. 'ಯುದ್ಧದಲ್ಲಿ ಮಡಿದರೆ ವೀರಸ್ವರ್ಗ', 'ಪ್ರಭುನಿಷ್ಠೆಯೇ ದೈವ ಸಾನಿಧ್ಯ' ಎಂಬಿತ್ಯಾದಿ ನಿಲುವುಗಳನ್ನು ಪ್ರಚುರಪಡಿಸುತ್ತಿದ್ದ ಅಂದಿನ ಸಾಮಾಜಿಕ ಸಂದರ್ಭದಲ್ಲಿ 'ಕಾಯಕವೇ ಕೈಲಾಸ'ಎಂದು ಹೇಳುವುದು ಎಷ್ಟು ಕಷ್ಟದ ಸಂಗತಿ? ಪ್ರಭುತ್ವ, ಸೈನ್ಯ, ಸೈನಿಕರ ಪರಭಾಷೆಗಳನ್ನೆ ಶ್ರೇಷ್ಠವೆನಿಸಿಕೊಂಡ ಉದಾತ್ತ ವ್ಯಕ್ತಿಗಳ, ಪುರಾಣ ಪುರುಷರ ವೈಭವದ ವರ್ಣನೆಯ ಸಾಹಿತ್ಯಯುಗಕ್ಕೆ ಪ್ರತಿ ಅಭಿವ್ಯಕ್ತಿಯ ಕ್ರಮವಾಗಿ ಕಂಡು ಬಂದ ವಚನ ಸಾಹಿತ್ಯ ದುಡಿಯುವ ವರ್ಗದ, ಮಹಿಳೆಯರ, ದಲಿತರ, ದುರ್ಬಲರ ದನಿಯಾಗಿ ಚಳುವಳಿಯ ಆಶಯಗಳನ್ನು ರೂಪಿಸಿಕೊಂಡಿರುವುದು ಇಡೀ ವಚನಗಳ ಹಿನ್ನೆಲೆಯನ್ನು ಮರುಚಿಂತನೆಗೆ ಒಳಪಡಿಸುವ ಅನಿವಾರ್ಯತೆಯನ್ನು ನಮ್ಮ ಮುಂದಿಡುತ್ತದೆ.

**೧. ಶರಣರ ಸಮುದಾಯದ ಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೆ?**

**ಉತ್ತರ:** ಶರಣರ ಸಮುದಾಯ ಕಲ್ಪನೆ ವಿಶಿಷ್ಟ, ಸಮಗ್ರ, ಹಾಗೂ ಪರಿಪೂರ್ಣ. ಅದು ಯಾವುದೊ ಒಂದು ಜಾತಿ, ವರ್ಗ, ವರ್ಣವನ್ನು ಆಧರಿಸಿ ನಿರ್ಮಿಸಿದ ಕಲ್ಪನೆಯಲ್ಲ. ಸಹಬಾಳ್ವೆ, ಸಮಾನತೆ, ಪರಸ್ಪರ ಸಹಕಾರ, ಸಹಾನುಭೂತಿ, ಅರಿವು, ಆಚಾರ, ನಡೆ, ನುಡಿ

ಇತ್ಯಾದಿ ಸಿದ್ಧಾಂತಗಳ ಮೇಲೆ ರೂಪುಗೊಂಡ ಜನಮುಖಿ ಆಶಯಗಳ ಪರಿಕಲ್ಪನೆ. ಶರಣ ಸಮುದಾಯಕ್ಕೊಂದು ವಚನ ಸಂವಿಧಾನವಿದೆ. ಅಲ್ಲಿ ಮೇಲು–ಕೀಳು, ಹೆಣ್ಣು–ಗಂಡು, ಬಡವ–ಶ್ರೀಮಂತರೆಂಬ ಭಿನ್ನ– ಭೇದವಿಲ್ಲ. ಶರಣರ ಗಡಣದಿಂದ ಆಚೆ ಹೋಗಿ ಬದುಕುವುದು ಅಸಾಧ್ಯವೆಂಬಷ್ಟು ಮಟ್ಟಿಗೆ ಬದ್ಧ ಜೀವನಕ್ರಮಕ್ಕೆ ಅವರು ಶರಣಾಗಿದ್ದರು. "ಜಲವ ತಪ್ಪಿದ ಮತ್ಸ್ಯ ಬದುಕುವುದೆ ಸೋಜಿಗ. ಗಣತಿಂತಿಣಿಯೊಳಗಿರಿಸೆನ್ನ ಲಿಂಗವೆ ಶಿವಶಿವಾ ಕೂಡಲಸಂಗಮದೇವ ಸೆರಗೊಡ್ಡಿ ಬೇಡುವೆ" ಎಂಬ ಬಸವಣ್ಣನವರ ಮಾತು ಶರಣರ ಸಮುದಾಯ, ಸಂಘಟನೆಯ ಪ್ರಜ್ಞೆಯನ್ನು ನೆನಪಿಸುತ್ತದೆ. ಒಟ್ಟಿಗೆ ಬದುಕುವ, ದುಡಿಯುವ, ಉಣ್ಣುವ, ಚಿಂತನೆಗೆ ತೊಡಗುವ ಸರಳ ಜೀವನ ಶೈಲಿ ಸದಾ ಕಾಲಕ್ಕೂ ಮಾದರಿ. ಕಾರ್ಲ್ ಮಾರ್ಕ್ಸ್‌ನ ಸಮಾಜವಾದಿ ಸಿದ್ಧಾಂತಕ್ಕಿಂತಲೂ ಬಸವಣ್ಣನೇ ಮೊದಲಾದ ಶರಣರ ಸಮಾಜವಾದಿ ನಿಲುವುಗಳು ಇನ್ನೂ ಹೆಚ್ಚು ಮುಂದುವರಿದಿದೆ. ಮಾರ್ಕ್ಸ್ Dignity of Labour ಬಗ್ಗೆ ಮಾತಾಡಿದರೆ ಬಸವಣ್ಣನವರು Dignity and Divinity of Labour ಕುರಿತು ವಚನ ವಿವೇಚನೆಗೆ ತೊಡಗುತ್ತಾರೆ. ನಮ್ಮ ದುಡಿಮೆಯಲ್ಲಿ ವೈಯಕ್ತಿಕ ಹಿತಕ್ಕಿಂತ ಸಮುದಾಯದ ಹಿತಪಾಲನೆಯ ಸದುದ್ದೇಶ ಅಡಗಿದೆ. ಸಮುದಾಯವು ಉನ್ನತಿ ಪಡೆಯಲು ಬಾಹ್ಯಶುದ್ಧತೆಯ ಜೊತೆಗೆ ಅಂತರಂಗದ ಶುದ್ಧತೆಯ ಕುರಿತು ಮಾತಾಡುತ್ತಾರೆ. ಚಾರಿತ್ರ್ಯಭರಿತ ಅರ್ಥಶಾಸ್ತ್ರದ ಪರಿಕಲ್ಪನೆ ಅಲ್ಲಿ ಮುಖ್ಯ.

**೩. ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು ಎಂದು ನಿಮಗನ್ನಿಸುತ್ತದೆಯೆ?**

**ಉತ್ತರ:** ಹೌದು. ಶರಣರ ಸಮ ಸಮಾಜ ಚಿಂತನೆಯಲ್ಲಿ ಸ್ತ್ರೀಗೆ ಪ್ರಥಮ ಆದ್ಯತೆಯನ್ನು ನೀಡಲಾಗಿದೆ. ಹೆಣ್ಣಿನ ವ್ಯಕ್ತಿತ್ವದ ಘನತೆಯನ್ನು ಎತ್ತಿ ಹಿಡಿಯುವ ಶರಣರ ನಿಲುವುಗಳು ಜಗತ್ತಿನ ಮೊದಲ ಸ್ತ್ರೀ ಸಂವೇದನೆಯ ಪರಿಭಾಷೆಗಳಾಗಿವೆ. ಜಗತ್ತಿನ ಎಲ್ಲ ಧಾರ್ಮಿಕ–ತತ್ವಜ್ಞಾನದ ನಿಲುವುಗಳು ಸಾಮಾನ್ಯವಾಗಿ ಸ್ತ್ರೀ ದೇಹದ ಕಾರಣಕ್ಕಾಗಿ ನಿಕೃಷ್ಟಳು ಎಂದೇ ಬಿಂಬಿಸುತ್ತವೆ. ಹುಟ್ಟಿನ ಕಾರಣಕ್ಕಾಗಿ ಅವಳು ಸಮಾನತೆಯನ್ನು ನಿರೀಕ್ಷಿಸಲು ಅನರ್ಹಳು ಎಂದೆ ಭಾವಿಸುತ್ತವೆ. ಆದರೆ ವಚನಕಾರರು ಎತ್ತುವ ಸೂತಕ, ಮುಟ್ಟು ಮೈಲಿಗೆಯ ಪ್ರಶ್ನೆ ವೈಚಾರಿಕತೆಯಿಂದ ಹುಟ್ಟಿರುವ ಪ್ರಶ್ನೆಗಳಾಗಿವೆ. ಮುಟ್ಟು ಎಂದರೆ ಹೊಲೆ. ಅಸಹ್ಯ ಮತ್ತು ಅಸ್ಪೃಶ್ಯ. ಆದರೆ ಶರಣರು ಹೆಣ್ಣನ್ನು ಪರಿಭಾವಿಸಿದ ರೀತಿ ಪ್ರಪಂಚಕ್ಕೆ ಮಾದರಿಯಾದುದು. ಹೆಣ್ಣು ಮಾಯೆ ಅಲ್ಲ, ರಾಕ್ಷಸಿಯಲ್ಲ, ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದರು ಶರಣರು. ಲಿಂಗಭೇದದ ಕಡು ವಿರೋಧಿಗಳಾದ ಶರಣರು ಸ್ತ್ರೀ ಕುಲವನ್ನು ಘನತೆ ಮತ್ತು ಗೌರವದಿಂದ ಬದುಕುವ ಸಾಮಾಜಿಕ ಸನ್ನಿವೇಶವನ್ನು ನಿರ್ಮಾಣ ಮಾಡಿದ ಮೊದಲ ಧಾರ್ಮಿಕ ವೀರರು. ಮುಟ್ಟಿನ ಕಾರಣಕ್ಕಾಗಿಯೇ ಹೆಣ್ಣನ್ನು ಧಾರ್ಮಿಕ ಆಧಿಕಾರಗಳಿಂದ ದೂರವಿಟ್ಟ ಧರ್ಮದ ಸಾಂಸ್ಕೃತಿಕ ಹುನ್ನಾರಗಳನ್ನು ಬಯಲುಮಾಡಿದರು. ಮುಟ್ಟಿನ ಸಮಯದಲ್ಲಿ ದೇವಾಲಯ ಪ್ರವೇಶವನ್ನು ನಿರಾಕರಿಸಲಾಗುತ್ತದೆ. ಅಷ್ಟೇ ಏಕೆ ಗೃಹಲಕ್ಷ್ಮೀ ಎಂದು ಹೊಗಳಿಸಿಕೊಂಡು ಸ್ವತಃ ತನ್ನ ಮನೆಯ ಒಳಗೆ ಪ್ರವೇಶಿಸುವಂತಿಲ್ಲ. ಶರಣರು ಈ ಬಗೆಯಲ್ಲಿ ನಿರ್ಬಂಧಗಳನ್ನು ಒಡ್ಡಿದ ಸಾಮಾಜಿಕ ವಿಷಮತೆಯನ್ನು, ರೀತಿ ರಿವಾಜುಗಳನ್ನು ಪ್ರಶ್ನಿಸಿದರು. ಜೇಡರ ದಾಸಿಮಯ್ಯನ ವಚನ, "ನಿಡಿದೊಂದು ಕೋಲನು ಕಡಿದು ಎರಡು ಮಾಡಿ, ಅಡಿಯ ಹೆಣ್ಣು ಮಾಡಿ, ಒಡತನದ ಗಂಡು ಮಾಡಿ ನಡುವೆ ಹೊಸೆದಡೆ ಹುಟ್ಟಿದ ಕಿಚ್ಚು ಹೆಣ್ಣೊ ಗಂಡೋ?" ಎಂಬ ತಾರ್ಕಿಕ ಪ್ರಶ್ನೆಯನ್ನೆತ್ತುತ್ತಾನೆ. ಲಿಂಗಬೇಧವನ್ನು ನಿರಾಕರಿಸುವ ಶರಣರು ಜಗತ್ತಿನ ಮೊದಲ ಪ್ರಬುದ್ಧ ಸ್ತ್ರೀವಾದಿಗಳು.



**೪. ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೆ?**

**ಉತ್ತರ:** ಶರಣ ಚಳುವಳಿಯ ಚೌಕಟ್ಟಿನಿಂದ ಆಚೆನಿಂತು ಶರಣೆಯರು ಪ್ರತ್ಯೇಕ ಹೋರಾಟ ಮಾಡಲಿಲ್ಲ. ಶರಣರು ಮತ್ತು ಶರಣೆಯರ ಒಟ್ಟಾದ ಸಂಘಟನಾತ್ಮಕ ಧೋರಣೆಯೊಂದನ್ನು ಶರಣರಲ್ಲಿ ಕಾಣುತ್ತೇವೆ. ಅಕ್ಕ ತೋರಿಸುವ ಅಸಾಧಾರಣ ಧೈರ್ಯ ಮತ್ತು ಪುರುಷಾಧಿಕಾರವನ್ನು ವಿರೋಧಿಸುವ ನಿಲುವುಗಳು ಅದು ಎಲ್ಲ ಶರಣರ ನಿಲುವು ಎಂದು ಹೇಳಲು ಸಾಧ್ಯವಿಲ್ಲ. 'ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯಿ' ಎಂದು ಹೇಳುವ ಅಕ್ಕನ ಹೋರಾಟ ಕೆಲವೊಮ್ಮೆ ಏಕಾಂಗಿ ನೆಲೆಯಿಂದ ಹೊರಟ ದನಿಯಾಗಿ ಕಾಣಿಸುತ್ತದೆ. ಈ ದೃಷ್ಟಿಯಿಂದ ಶರಣೆಯರು ಬದಲಾವಣೆಯ ಹೊಸ ಸಂಚಲನವನ್ನು ತಮ್ಮ ವೈಯಕ್ತಿಕ ಬದುಕಿನ ಮಿತಿಯಲ್ಲಿ ನಿರ್ವಚಿಸಿದ್ದು ವಿಶೇಷ.

**೫. ನಿಮಗೆ ಪ್ರಿಯರಾದ ವಚನಕಾರರು ಹಾಗೂ ವಚನಕಾರ್ತಿಯರನ್ನು ಕುರಿತು ವಿವರವಾಗಿ ಹೇಳಿ:**

**ಉತ್ತರ:** ಹಾಗೆ ನೋಡಿದರೆ ಪ್ರತಿ ವಚನಕಾರನೂ ಹಾಗೂ ವಚನಕಾರ್ತಿಯೂ ನಮಗೆ ಮುಖ್ಯರಾಗುತ್ತಾರೆ. ವಚನ ರಚನೆಗಳು ಸಾಮೂಹಿಕ ನೆಲೆಯ ರಚನೆಯ ಮಾದರಿಗಳಾಗಿರುವುದರಿಂದ ಅದರಲ್ಲಿ ಸಾಕಷ್ಟು ವಿಚಾರ ವಿವೇಕ ತುಂಬಿದೆ. ಅಲ್ಲಮ ಹಲವು ನೆಲೆಗಳಲ್ಲಿ ಪ್ರಮುಖ ವಚನಕಾರನೆಂದು ನನಗನ್ನಿಸುತ್ತದೆ. ಅವನ ವಚನ ಪರಿಭಾಷೆಗಳು ಸಾಹಿತ್ಯಾತ್ಮಕವಾದುವು; ಹಾಗೆ ಸುಲಭವಾಗಿ ದಕ್ಕುವಂತದ್ದಲ್ಲ. ಪದಪದವನ್ನು ಧ್ಯಾನಿಸಿ ಬರೆವ ವಚನಕಾರ ಅಲ್ಲಮನೆಂಬುದು ನನ್ನ ಅನಿಸಿಕೆ. ಬಸವಣ್ಣ, ಘಟ್ಟಿವಾಳಯ್ಯ, ಅಂಬಿಗರ ಚೌಡಯ್ಯ ಮೊದಲಾದವರಲ್ಲಿ ವಚನಗಳು ಮನದ ಮಾತಾಗಿ ಬದಲಾಗುತ್ತವೆ. ಅವು ಬೀಸು ಹೇಳಿಕೆಗಳಲ್ಲ. ಅದರ ಸಾರ ಸತ್ವ ಸಾಹಿತ್ಯದ ಭಾಷೆ ಹೆಚ್ಚು ಸುಲಭವಾಗಿ ಗ್ರಾಹ್ಯವಾಗುವುದರಿಂದ ಇವರು ಇಷ್ಟವಾಗುತ್ತಾರೆ. ವಚನಕಾರ್ತಿಯರಲ್ಲಿ ಅಕ್ಕ ನಾಗಮ್ಮ, ಸತ್ಯಕ್ಕ, ಮುಕ್ತಾಯಕ್ಕ, ಮಹಾದೇವಿಯಕ್ಕ, ಸೂಳೆ ಸಂಕವ್ವೆ, ನೀಲಾಂಬಿಕೆ ಮೊದಲಾದವರು ತಮ್ಮ ಮೆಚ್ಚಿನ ಶರಣರ ಸಹಾನುವರ್ತಿಗಳಾಗುವುದರ ಜೊತೆಗೆ ವಿಶಿಷ್ಟ ಚಿಂತನೆಯ ನೆಲೆಗಳನ್ನು ಶೋಧಿಸಿಕೊಂಡ ಬಗೆ ನಿಜಕ್ಕೂ ಮನನೀಯವೆನಿಸುತ್ತದೆ. ಇಡೀ ವಚನ ಸಾಹಿತ್ಯದ ಉಳಿವಿಗೆ ಕಾರಣಳಾದ ಅಕ್ಕ ನಾಗಮ್ಮ ಬದುಕು ಮತ್ತು ವಚನ ಎಂಬುದನ್ನು ಒಂದೆ ಎಂದು ಪರಿಭಾವಿಸಿದವಳು. ಅಕ್ಕ ನಮ್ಮೊಳಗಿನ ಸ್ತ್ರೀ ದನಿ. ಅಕ್ಕನನ್ನು ಹೊರತುಪಡಿಸಿ ಸ್ತ್ರೀವಾದಿ ಸಿದ್ಧಾಂತಗಳನ್ನು ನೋಡಲು ಸಾಧ್ಯವಿಲ್ಲ.

**೬. ಹೆಣ್ಣು ಮತ್ತು ಆರ್ಥಿಕ ಸ್ವಾವಲಂಬನೆಯ ಹೊಳಹುಗಳನ್ನು ವಚನಕಾರ್ತಿಯರಲ್ಲಿ ಗುರುತಿಸಲು ಸಾಧ್ಯವಿದೆಯೆ?**

**ಉತ್ತರ:** ನಮಗೆ ದೊರೆಯುವ ಪ್ರತಿ ವಚನಕಾರ್ತಿಯರು ಕಾಯಕನಿಷ್ಠರು. ದುಡಿಮೆ ಅವರ ಬದುಕಿನ ವಿಶಿಷ್ಟ ತತ್ವ. ಕೈಕೂಲಿ ಕೆಲಸ ಮಾಡುವ ಆಯ್ದಕ್ಕಿ ಲಕ್ಕಮ್ಮ (ಆಯ ಎಂಬ ಪದಕ್ಕೆ ಕೂಲಿ ಎಂಬರ್ಥವೂ ಇರುವುದರಿಂದ ಕೂಲಿ ಕೆಲಸ ಮಾಡುವ ಆಯ್ದಕ್ಕಿ ಲಕ್ಕಮ್ಮ ಎನ್ನುವುದೊಳಿತು), ಕಸಗುಡಿಸುವ ಕಾಯಕ ಮಾಡುವ ಸತ್ಯಕ್ಕ, ನೂಲುವ ಕಾಯಕ ಮಾಡುವ ಕದಿರೆ ರೆಮ್ಮವ್ವೆ, ಕೊಟ್ಟಣ ಕುಟ್ಟುವ ಕಾಯಕ ಮಾಡುವ ಸೋಮವ್ವ, ಕುಂಬಾರಿಕೆಯ ವೃತ್ತಿ ಮಾಡುವ ಕೇತಲದೇವಿ ಇವರೆಲ್ಲರು ಆರ್ಥಿಕ ಸ್ವಾವಲಂಬನೆಯನ್ನು ಪ್ರತಿನಿಧಿಸುವವರೆ ಆಗಿದ್ದಾರೆ. ಆದರೆ ಅವರ ಸ್ವಾವಲಂಬನೆಯ ನಿಲುವುಗಳು ಇಂದಿಗೆ ನಾಳೆಗೆ ಕೂಡಿಡುವ

ಧೋರಣೆಯಿಂದ ಹುಟ್ಟಿಲ್ಲ. ಬದಲಿಗೆ ಕಾಯಕ, ದಾಸೋಹದ ನೆಲೆಯಲ್ಲಿ ಹೆಣ್ಣಿನ ದುಡಿಮೆ ಸಾರ್ಥಕವಾಗಬೇಕೆಂಬ ಸಮಾಜಮುಖಿ ಆಶಯಗಳಿಗೆ ಬದ್ಧವಾಗಿದೆ.

**೭.ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೆ?**

**ಉತ್ತರ:** ಸಹಿಷ್ಣುತೆಯನ್ನು ವಚನಗಳ ಪರಿಭಾಷೆಯಿಂದ ಭಿನ್ನವಾಗಿಯೇ ನೋಡಬೇಕಾಗುತ್ತದೆ. ಅವರು ಕಷ್ಟ ಸಹಿಷ್ಣುಗಳು. ಶ್ರಮಜೀವಿಗಳು. ಪರ ಸಹಾನುಭೂತಿ ಹೊಂದಿದವರು. ಆದರೆ ಇತರ ಧರ್ಮಗಳ ಧಾರ್ಮಿಕ ಕಟ್ಟುಪಾಡುಗಳು, ಮೌಢ್ಯಗಳ ಪ್ರಶ್ನೆ ಬಂದಾಗ ಅದನ್ನು ವಿರೋಧಿಸುವಲ್ಲಿ ಸಹಿಷ್ಣುತೆಯ ಉದಾರವಾದಿ ನಿಲುವುಗಳನ್ನು ಅವರು ಪ್ರದರ್ಶಿಸುವುದಿಲ್ಲ.

**೮.ವಚನಗಳ ಕಾವ್ಯ ಸೌಂದರ್ಯವನ್ನು ಕುರಿತು ಹೇಳಿ**

**ಉತ್ತರ:** ವಚನವೆಂಬ ಪದವೇ ಅತ್ಯಂತ ಆಪ್ತವಾದ, ವಿಚಾರಶೀಲ, ವಿವೇಕಯುತ ನಡವಳಿಕೆಯ ಕಾವ್ಯ ಸೌಂದರ್ಯವನ್ನು ಧ್ವನಿಸುವುದಾಗಿದೆ. ನಮ್ಮ ಚಂಪೂ ಕಾವ್ಯಗಳಲ್ಲಿಯೇ ವಚನವೆಂಬ ಪ್ರಯೋಗವಿದ್ದರೂ ಹನ್ನೆರಡನೇ ಶತಮಾನದಲ್ಲಿ ಕಾಣಿಸಿಕೊಂಡ ಲಕ್ಷಾಂತರ ವಚನಗಳು ಕಾವ್ಯ ನಿಷ್ಠೆಯನ್ನು, ಭಾವ ಸೌಂದರ್ಯವನ್ನು ತಮ್ಮ ಒಡಲಲ್ಲಿ ಗರ್ಭೀಕರಿಸಿಕೊಂಡಿರುವುದು ಮೇಲು ನೋಟಕ್ಕೆ ಕಂಡು ಬರುವ ಸಂಗತಿ. ಕಾವ್ಯ ಲಕ್ಷಣಗಳಿಗೆ ಬದ್ಧವಾಗಿ ವಚನಕಾರರರು ಬರೆಯದಿದ್ದರೂ ಅಲ್ಲಿರುವ ಧ್ವನಿ ಸಾದೃಶ್ಯ, ಉಪಮಾ, ರೂಪಕಗಳು ಸಹೃದಯ ಓದುಗರನ್ನು ತನ್ನತ್ತ ಸೆಳೆಯುವಲ್ಲಿ ಯಶಸ್ವಿಯಾಗಿವೆ. ಇವು ಕೆಲವೊಮ್ಮೆ ಅನುಭಾವದ ಭಾವಗೀತೆಗಳು; ಸೂಳ್ನುಡಿಗಳು. ಸೂಳ್ ಎಂಬುದಕ್ಕೆ ಸರದಿ ಎಂಬರ್ಥವೂ ಇರುವುದರಿಂದ ಸರದಿ ಪ್ರಕಾರ ಆಡಿದ ಮಾತೂ ಹೌದು. ವಚನಗಳ ಪದಶಕ್ತಿ ಬಹಳ ದೊಡ್ಡದು. ಕವಿಗಿರಬೇಕಾದ ಮೂಲ ಅರ್ಹತೆ ಅದು. ಸಂದರ್ಭಾನುಸಾರವಾಗಿ ಪದಗಳನ್ನು ಟಂಕಿಸುವ ಕಾವ್ಯ ಕಮ್ಮಾರರ ಹಾಗೆ ವಚನಕಾರರರು ಕಾಣುತ್ತಾರೆ. ಅದೊಂದು ಹಾಡುವ ವಿಧಾನವೂ ಆಗಿರಬಹುದಾದ ಸಾಧ್ಯತೆ ಇದೆ. ಸಿದ್ಧರಾಮೇಶ್ವರರು, 'ಅರವತ್ತೆಂಟು ಸಾವಿರ ವಚನಗಳ ಹಾಡಿ ಹಾಡಿ ಸೋತಿತೆನ್ನ ಮನ ನೋಡಯ್ಯ, ಹಾಡುವುದೊಂದೆ ವಚನ, ನೋಡುವುದೊಂದೆ ವಚನ..' ಇತ್ಯಾದಿ ಮಾತುಗಳ ಮೂಲಕ ವಚನ ಸಾಹಿತ್ಯ ಸಿರಿದೇವಿಯ ಮುಡಿಯ ಮುಕುಟ ಎಂಬುದರಲ್ಲಿ ಎರಡು ಮಾತಿಲ್ಲ.

**೯.ಶರಣ ಚಳುವಳಿಯಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಅಂಶಗಳು ಯಾವುವು?**

**ಉತ್ತರ:** ಶರಣರ ಸರಳ ಜೀವನ ವಿಧಾನ ನನಗೆ ತುಂಬಾ ಇಷ್ಟ. ನುಡಿದಂತೆ ನಡೆಯುವ ಅವರ ನಿಲುವು ನನಗಂತೂ ಅಚ್ಚರಿ. ಜಾತಿ ವಿರೋಧಿ ನಿಲುವುಗಳು,ಸ್ತ್ರೀಪರ ಆಶಯಗಳು ಇಂದಿಗೂ ಸಮತ್ವಕ್ಕೊಂದು ಹಿಡಿದ ಕನ್ನಡಿ. ಸದಾ ಕಾಲದ ಚೈತನ್ಯ. ದೇವರು, ಧರ್ಮದ ಹೆಸರಿನಲ್ಲಿ ಶೋಷಣೆಯ ಮೂಲಗಳು ಇಂದಿಗೂ ತಲೆಎತ್ತಿ ನಿಲ್ಲುವ ಸಂದರ್ಭದಲ್ಲಿ ದೇಹವನ್ನು ದೇಗುಲವಾಗಿಸುವ, ನಾವು ದುಡಿದು ಉಣ್ಣುವ ಶ್ರಮದ ಅನ್ನವನ್ನು ಪ್ರಸಾದವಾಗಿಸುವ ಶರಣರ ನಿಲುವು ನನಗಿಷ್ಟ.

**೧೦.ವಚನಕಾರರನ್ನು ಮಾದರಿಯಾಗಿ ನೋಡುವುದರ ಬಗ್ಗೆ ನಿಮ್ಮ ಆಲೋಚನೆಗಳು:**

**ಉತ್ತರ:** ಬಸವಾದಿ ಶಿವಶರಣರು ನಮ್ಮ ಆದರ್ಶ. ಆರೋಗ್ಯಪೂರ್ಣ ಸಮಾಜ ನಿರ್ಮಾಣಕ್ಕೆ ನಮ್ಮೆದುರಿಗಿರುವ ಸ್ಥಿರಮಾದರಿ. ವಚನ ಸಾಹಿತ್ಯಕ್ಕೆ ಹಲವಾರು ಮಿತಿಗಳಿದ್ದರೂ ವಚನಗಳ ಉದಾತ್ತತೆಯ ಮುಂದೆ ಅದು ನಗಣ್ಯವೆಂದೆ ನನ್ನ ಭಾವನೆ.

●



# ವಚನ-ವೈಚಾರಿಕತೆ-ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

*ನಂ. 302/25, ಜೇನುಕಲ್ ಪ್ಯಾರಡೈಸ್,*
*ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್*
*1ನೇ ಹಂತ, ಬೆಂಗಳೂರು - 560 086*

*94810 35983*

ಮನೋವಿಜ್ಞಾನದ ಮಹಾನ್ ವ್ಯಕ್ತಿ ಎಂದೆನಿಸಿಕೊಂಡಿರುವ ಸಿಗ್ಮಂಡ್ ಫ್ರಾಯ್ಡ್, ಮನಸ್ಸನ್ನು ಕುರಿತು ಅಧ್ಯಯನ ಮಾಡಿದ, ಮನೋವಿಶ್ಲೇಷಣೆಯನ್ನು ಪ್ರತಿಪಾದಿಸಿದ ಮೊದಲ ವಿಜ್ಞಾನಿ ಎಂದು ಸಾಮಾನ್ಯವಾಗಿ ಪರಿಗಣಿಸಲಾಗುತ್ತದೆ. ಆತ ಪ್ರತಿಪಾದಿಸಿದ ಕೆಲವು ಸಿದ್ಧಾಂತಗಳು ಇಂದಿಗೂ ಚರ್ಚಿತವಾಗುತ್ತಿರುವ ವಿಷಯಗಳಾಗಿವೆ. ಫ್ರಾಯ್ಡ್ ೧೯ ನೆಯ ಶತಮಾನದಲ್ಲಿದ್ದ ಆಸ್ಟ್ರಿಯಾದ ಮನೋವಿಜ್ಞಾನಿ. ಆತನ ನಂತರ ಮನೋವಿಜ್ಞಾನ ನಿರಂತರವಾಗಿ ಬೆಳೆಯುತ್ತಿರುವ ವಿಜ್ಞಾನದ ಶಾಖೆಯಾಗಿದ್ದರೂ ಸಹ ಇಂದಿಗೂ ಮನೋವಿಜ್ಞಾನ ಎಂದರೆ ಫ್ರಾಯ್ಡ್ ಎನ್ನುವಷ್ಟರ ಮಟ್ಟಿಗೆ ಅವನ ಕೊಡುಗೆ ಇದೆ. ಇದಕ್ಕೂ ಸುಮಾರು ಏಳು ಶತಮಾನಗಳ ಮುಂಚೆಯೇ ಶರಣರ ವಛನಗಳಲ್ಲಿ ಕಂಡು ಬರುವ ಮನಸ್ಸಿನ ಬಗೆಗಿನ ಕಲ್ಪನೆ ನಮ್ಮನ್ನು ಬೆರಗುಗೊಳಿಸುತ್ತದೆ.

ಮನಸ್ಸು ಎಂಬುದು ಒಂದು ಹಿಡಿತದಲ್ಲಿ ಇಡಲು ಕಷ್ಟಸಾಧ್ಯವಾದ ಘಟಕ ಸಾಧನೆಗೆ ಅದನ್ನು ನಿಯಂತ್ರಣದಲ್ಲಿಡುವುದು ಅತ್ಯವಶ್ಯಕ ಎನ್ನುವುದು ಶರಣರ ಅಭಿಮತವಾಗಿತ್ತು. ಅಷ್ಟು ಮಾತ್ರವಾಗಿರದೇ ಮನಸ್ಸು ಮತ್ತು ಬುದ್ಧಿಗಳನ್ನು ಅವರು ಬೇರೆ ಬೇರೆಯಾಗಿ ನೋಡಿದರು. ಇದಕ್ಕೆ ನಮಗೆ ಹಲವಾರು ವಚನಗಳ ಸಾಕ್ಷ್ಯಾಧಾರಗಳು ಸಿಗುತ್ತವೆ. ಅಲ್ಲಮ ಪ್ರಭುದೇವರ ಈ ವಚನವನ್ನು ತೆಗೆದುಕೊಂಡರೆ,

**ಮನದ ಕತ್ತಲೆಯೊಳಗಣ ಜ್ಯೋತಿಯ ಕೊನೆಯಮೊನೆಯಮೇಲೆ**
**ಘನವನರಿದೆವೆಂಬರ ಅನುಮಾನಕ್ಕೆ ದೂರ.**
**ತಮತಮಗೆ ಅರಿದೆವೆಂಬರು,-ಕನಸಿನಲಿಂಗ ಗುಹೇಶ್ವರಾ.**

ಅಂದರೆ, ಪರಮ ವಸ್ತುವಿನ ಬಗೆಗಿನ ಅರಿವು ಎಂಬ ಕತ್ತಲೆ ಮನಸ್ಸಿನಲ್ಲಿ ತುಂಬಿದೆ. ಆ ಕತ್ತೆಲೆಯಲ್ಲಿಯೇ ಬುದ್ಧಿ ಎಂಬ ಚಿಕ್ಕ ಜ್ಯೋತಿಯೊಂದು ಬೆಳಗುತ್ತಿದೆ. ಅದನ್ನೂ ಮೀರಿ ಎಂದರೆ ಅದರ ಕಾರ್ಯವ್ಯಾಪ್ತಿಯನ್ನು ದಾಟಿ ಘನವಸ್ತುವು ನೆಲೆಸಿದೆ. ಅದುದರಿಂದ ಅದನ್ನು ಬುದ್ಧಿಯಿಂದಾಗಲೀ, ತರ್ಕದಿಂದಾಗಲೀ, ಅರಿಯಲು ಸಾಧ್ಯವಿಲ್ಲ. ಅದನ್ನು ಕಂಡೆ ಎಂದರೆ, ಅದು ಅವರ ಕನಸು ಮಾತ್ರ. ಏಕೆಂದರೆ ಅದನ್ನು ಕಾಣುವವ, ಕಾಣಿಸಿಳ್ಳುವ ವಸ್ತು, ಹಾಗೂ ಕಾಣುವ ಕ್ರಿಯ ಈ ಮೂರನ್ನೂ ಅಡಗಿಸಿ ಅದನ್ನು ಅನುಭವಿಸಬೇಕು.

ಏಕೆಂದರೆ ಅದು ಅದು ಮನೋಗ್ರಾಹ್ಯವೂ ಅಲ್ಲ, ಬುದ್ಧಿಗಮ್ಯವೂ ಅಲ್ಲ. ಇದನ್ನು ಗಮನಿಸಿದಾಗ ಅವರಿಗೆ ಮನಸ್ಸಿನ ಬಗ್ಗೆ ಇದ್ದ ಸ್ಪಷ್ಟ ಕಲ್ಪನೆಯ ಅರಿವಾಗುತ್ತದೆ. ಮನಸ್ಸಿನ ಗುಣ ಲಕ್ಷಣಗಳ ಅರಿವು ಅವರಿಗಿತ್ತು. ಅದನ್ನವರು ತಮ್ಮ ಅನುಭವದಿಂದ ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ಮಾಡಿದ್ದರು. ಜನರ ನಡವಳಿಕೆ ಮತ್ತು ಮಾನಸಿಕ ಪ್ರಕ್ರಿಯೆಗಳನ್ನು ಅಧ್ಯಯನ ಮಾಡುವ ಮತ್ತು ವಿಶ್ಲೇಷಿಸುವ ವೈಜ್ಞಾನಿಕ ಶಿಸ್ತು ಎಂದು ನಾವು ಸೈಕಾಲಜಿ ಅಥವಾ ಮನೋವಿಜ್ಞಾನವನ್ನು ಕರೆಯುತ್ತೇವೆ. ಅಂದು ಅವರು ಇದನ್ನು ಕೇವಲ ಮಾನವ ಮತ್ತು ಬಾಹ್ಯ ಜಗತ್ತಿನ ಸಂಪರ್ಕದ ವಿಷಯವನ್ನಾಗಿಸದೇ, ಜೀವನದ ಗುರಿಯನ್ನೇ, ಮನಸ್ಸಿನೊಂದಿಗೆ ಸಮೀಕರಿಸಿಕೊಂಡಿದ್ದರು. ತನು, ಮನಗಳ ನಡುವಿನ ಅಂತರ, ಮನದ ಚಂಚಲತೆ ಇವುಗಳನ್ನು ಬಹುತೇಕ ಎಲ್ಲ ಶರಣರು ಒಂದಲ್ಲ, ಒಂದು ಕಡೆ ತಮ್ಮ ವಚನಗಳಲ್ಲಿ ಪ್ರಸ್ತಾಪಿಸುವುದನ್ನು ನಾವು ನೋಡಬಹುದು. ಬಸವಣ್ಣನವರು–

**ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು,**
**ನಿಂದಲ್ಲಿ ನಿಲಲೀಯದೆನ್ನ ಮನವು,**
**ಹೊಂದಿದಲ್ಲಿ ಹೊಂದಲೀಯದೆನ್ನ ಮನವು**
**ಕೂಡಲಸಂಗಮದೇವಾ**
**ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು, ನಿಮ್ಮ ಧರ್ಮ.**

ಎನ್ನುವಲ್ಲಿ ಬಸವಣ್ಣನವರು ಮನದ ನಿಯಂತ್ರಣದ ಕಠಿಣತೆಯನ್ನು ವಿವರಿಸುತ್ತಾರೆ. ಮಾತ್ರವಲ್ಲ ಕೂಡಲಸಂಗಯ್ಯನಲ್ಲಿ ಮನಸ್ಸನ್ನು ನೆಲೆಗೊಳಿಸಲು  ಬೇಡಿಕೊಳ್ಳುತ್ತಾರೆ. ಇಲ್ಲಿ ಮನಸ್ಸಿನ ವಿಚಾರ ವಿಜ್ಞಾನದ ದೃಷ್ಟಿಯಿಂದಲ್ಲದೇ, ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದ್ದರೂ ಸಹ ಅವರಲ್ಲಿದ್ದ ಅನುಭವ ಅಧ್ಯಯನದಶೀಲತೆ ಅದಕ್ಕೊಂದು ವೈಜ್ಞಾನಿಕ ತಳಹದಿಯನ್ನು ಕೊಟ್ಟಿತ್ತು. ಮನಸ್ಸು ಆರೋಗ್ಯಕರವಾಗಿದ್ದಲ್ಲಿ ಅದರ ಸಂಚಲನವನ್ನು ನಿಯಂತ್ರಿಸಬಹುದು. ಇಲ್ಲದಿದ್ದಲ್ಲಿ ಜೀವನದ ನಿಜ ಗುರಿಯಾದ ಪರಮಾತ್ಮನನ್ನು ಅರಿಯಲು ಸಾಧ್ಯವಿಲ್ಲ ಎನ್ನುತ್ತಾರೆ ಶರಣರು.

**ಚಿತ್ತ ಶುದ್ಧವಿಲ್ಲದವರಲ್ಲಿ ಮನ ಸಂಚಲ ನಿಲ್ಲದು.**
**ಮನ ಸಂಚಲ ನಿಲ್ಲದವರಲ್ಲಿ ಶಿವಧ್ಯಾನ ಕರಿಗೊಳ್ಳದು.**
**ಶಿವಧ್ಯಾನ ಕರಿಗೊಳ್ಳದವನ ಮಾತು ಸಟೆ.**
**ಗುಹೇಶ್ವರಲಿಂಗವನರಿಯದ ಭ್ರಾಂತಿಯೋಗಿಗಳ ಮನ**
**ಬೇತಾಳನಂತೆ ಕಾಡುವುದು.**

ಯಾವುದೇ ಸಾಧನೆಗೂ ಮೂಲ ಕಾರಣ ಮನಸ್ಸು ಎನ್ನುವುದು ಅವರಿಗೆ ತಿಳಿದಿತ್ತು. ಅಲ್ಲಮ ಪ್ರಭುಗಳು ತಮ್ಮ ಮತ್ತೊಂದು ವಚನದಲ್ಲಿ

**ಮನದ ಕಾಲತ್ತಲು ತನುವಿನ ಕಾಲಿತ್ತಲು.**
**ಅನುಭಾವದ ಅನುವನು ನೆನೆವುತ್ತ ನೆನೆವುತ್ತ ಗಮನ ಕೆಟ್ಟಿತ್ತು.**
**ಲಿಂಗ ಮುಖದಲಾದ ಸೂಚನೆಯ ಸುಖವ ಕಂಡು ಗಮನ ಕೆಟ್ಟಿತ್ತು.**
**ಅನುವಾಯಿತ್ತು ಅನುವಾಯಿತ್ತು, ಅಲ್ಲಿಯೆ ತಲ್ಲೀನವಾಯಿತ್ತು–**
**ಗುಹೇಶ್ವರನೆಂಬ ಲಿಂಗೈಕ್ಯಂಗೆ.**



ಮಹದೇವಿಯಕ್ಕ ನನಗಿರುವ ಒಂದು ಮನವನ್ನು ನಿನಗರ್ಪಿಸಿದ ಮೇಲೆ, ನನ್ನ ಭವವೇ ಹರಿದು ಹೋಯಿತು. ಎಂದರೆ ತಾನು ಇಮ್ಮನವನ್ನು ಕರೆದುಕೊಂಡು ಭಿನ್ನಭಾವವಳಿದವಳಿದವಳು ಎಂದರೆ, ಪ್ರಭುಗಳು ಮನವಡಗಿದ ಜ್ಞಾನಚಕ್ಷು ತೆರೆಯದೇಯೇ, ಜ್ಞಾನಘನಲಿಂಗದ ಅರಿವು ಸಾಧ್ಯವಿಲ್ಲ ಎಂದು ಈ ವಚನದಲ್ಲಿ ನುಡಿಯುತ್ತಾರೆ.

**ಮನದ ಕೊನೆಯ ಮೊನೆಯ ಮೇಲೆ ನೆನೆದ ನೆನಹು**
**ಜನನ ಮರಣವ ನಿಲಿಸಿತ್ತು.**
**ಜ್ಞಾನಜ್ಯೋತಿಯ ಉದಯ ಭಾನುಕೋಟಿಯ ಮೀರಿ,**
**ಸ್ವಾನುಭಾವದ ಉದಯ ಜ್ಞಾನಶೂನ್ಯದಲಡಗಿದ**
**ಘನವನೇನೆಂಬೆ ಗುಹೇಶ್ವರಾ !**

ಇದರ ಪ್ರಕಾರ– ವಿಭಿನ್ನ ಭಾವನೆಗಳು ಹಾಗೂ ಅಸಂಖ್ಯ ವೃತ್ತಿಜ್ಞಾನಗಳು ಇರುವುದು ಮನದ ಒಡಲಿನಲ್ಲಿ ಅವೆಲ್ಲ ಅಡಗಿಹೋದರೆ ಅದು ಮನದ ಕೊನೆ. ಆ ಕೊನೆಯಲ್ಲಿ ಕಾಣಿಸುತ್ತದೆ ಮನಸ್ಸಿನ ಉನ್ಮನಿ ಸ್ಥಿತಿ. ಈ ಅವಸ್ಥೆಯಲ್ಲಿ ಅವನಿಗೆ ಅಲ್ಲಿ ಪ್ರಕಾಶಮಾನವಾದ ಜ್ಞಾನಲಿಂಗ ಎಂದರೆ, ಕೋಟಿಸೂರ್ಯರ ಪ್ರಭೆ ಕಂಡುಬರುತ್ತದೆ. ಈ ಪ್ರಕಾಶವನ್ನು ತಿಳಿಯಲು ಮನಸ್ಸು ಸಾಮಾನ್ಯವಾಗಿದ್ದರೆ ನಡೆಯುವುದಿಲ್ಲ ಬದಲಾಗಿ ಮನವಡಗಿದ ಜ್ಞಾನಚಕ್ಷು ತೆರೆಯಬೇಕು. ಎನ್ನುತ್ತಾರೆ. ಈ ಮನವಡಗುವುದು ಎನ್ನುವುದನ್ನು ವಿಜ್ಞಾನ ವಿವರಿಸುವಲ್ಲಿ ಅಸಮರ್ಥವಾಗುತ್ತದೆ. ತನ್ನನ್ನು ತಾ ಮರೆತು ಜ್ಯೋತಿಯೊಳು ಬೆರೆದು ಜ್ಯೋತಿಯಾಗುವ ಈ ರೀತಿಯನ್ನು ಶರಣರು ಮಾತ್ರ ಅರ್ಥೈಸಿಕೊಳ್ಳಬಲ್ಲರು.ಅದನ್ನು ಅವರು ಐಕ್ಯಸ್ಥಿತಿ ಎನ್ನುತ್ತಾರೆ.

ಪ್ರಪಂಚದ ಮೊದಲ ಪ್ರಾಯೋಗಿಕ ಮನಶಾಸ್ತ್ರ ಪ್ರಯೋಗಾಲಯದ ರಚನೆ ಮಾಡಿದ ವೂಂಟ್ಟ್, ಮಾನವನ ಮನಸ್ಸು ಮತ್ತು ವರ್ತನೆಯನ್ನು ಅಧ್ಯಯನ ಮಾಡಲು ವೈಜ್ಞಾನಿಕ ವಿಧಾನಗಳನ್ನು ಬಳಸಿದ. ವುಂಟ್ಟ್ ಮನೋವಿಜ್ಞಾನವನ್ನು ತತ್ವಶಾಸ್ತ್ರ ಮತ್ತು ಜೀವಶಾಸ್ತ್ರದ ಮಿಶ್ರಣದಿಂದ ತೆಗೆದುಕೊಂಡು ಅದನ್ನು ಒಂದು ಅನನ್ಯ ಕ್ಷೇತ್ರದ ಅಧ್ಯಯನವನ್ನಾಗಿಸಿದ. ವುಂಟ್ಟ್ ರ ವಿವರಣೆ ಅನೇಕ ವೇಳೆ ಸೈದ್ಧಾಂತಿಕ ದೃಷ್ಟಿಕೋನದಿಂದ ರಚನೆಗೊಂಡಿದೆ, ಅದು ರಚನಾತ್ಮಕತೆ ಎಂದು ಕರೆಯಲ್ಪಡುತ್ತದೆ, ಅದು ಮನಸ್ಸನ್ನು ರಚಿಸುವ ರಚನೆಗಳನ್ನು ವರ್ಣಿಸುತ್ತದೆ. ರಚನಾ ಕೌಶಲ್ಯವನ್ನು ಮನೋವಿಜ್ಞಾನದ ಮೊದಲ ಚಿಂತನೆಯ ಶಾಲೆ ಎಂದು ಪರಿಗಣಿಸಲಾಗಿದೆ. ಮನೋವಿಜ್ಞಾನವು ಪ್ರಜ್ಞಾಪೂರ್ವಕ ಅನುಭವದ ವಿಜ್ಞಾನವಾಗಿದೆ ಮತ್ತು ತರಬೇತಿ ಪಡೆದ ವೀಕ್ಷಕರು ಆಲೋಚನೆಗಳು, ಭಾವನೆಗಳು ಮತ್ತು ಭಾವನೆಗಳನ್ನು ಆತ್ಮಾವಲೋಕನ ಎಂಬ ಪ್ರಕ್ರಿಯೆಯ ಮೂಲಕ ನಿಖರವಾಗಿ ವಿವರಿಸಬಹುದು ಎಂದು ಅವರು ನಂಬಿದ್ದರು.

ಆದಾಗ್ಯೂ, ವೂಂಟ್ಟ್ ಆತ್ಮಾವಲೋಕನದ ನಡುವಿನ ಸ್ಪಷ್ಟ ವ್ಯತ್ಯಾಸವನ್ನು ವ್ಯಕ್ತಪಡಿಸಿದನು, ಅದು ನಿಖರವಾಗಿಲ್ಲ ಮತ್ತು ಆಂತರಿಕ ಗ್ರಹಿಕೆ ಎಂದು ಅವರು ನಂಬಿದ್ದರು.ವೂಂಟ್ಟ್ ಪ್ರಕಾರ, ಆಂತರಿಕ ಗ್ರಹಿಕೆಯು ಸರಿಯಾಗಿ ತರಬೇತಿ ಪಡೆದ ವೀಕ್ಷಕನನ್ನು ಒಳಗೊಳ್ಳುತ್ತದೆ, ಅವರು ಆಸಕ್ತಿಯ ಪ್ರಚೋದನೆಯನ್ನು ಪರಿಚಯಿಸಿದಾಗ ಅದು  ತಿಳಿದುಬರುತ್ತದೆ.

೧೨ನೆಯ ಶತಮಾನದಲ್ಲಿಯೇ ಶರಣರು ಇವೆಲ್ಲವನ್ನೂ ಮೀರಿದ ಜ್ಞಾನವನ್ನು

ಮನಸ್ಸಿನ ಬಗೆಗೆ ತಿಳಿದಿದ್ದರು. ಅವರ ಕರದಿಷ್ಟಲಿಂಗದಲ್ಲಿ ಮನವನ್ನು ಕೇಂದ್ರೀಕರಿಸಿಕೊಂಡು ಅದರಿಂದ ಮಹಾಘನವನ್ನು ಅರಿವ ಸಾಧನೆಯನ್ನು ತೊಡಗಿಸಿಕೊಂಡಿದ್ದರು. ಇದು ಪರವಸ್ತುವಿನ ಅರಿವಿಗಾಗಿ ಕಂಡುಕೊಂಡ ಹಾದಿ ಎಂದುಕೊಂಡರೂ, ಶರಣರು ಯಾವುದೋ ಗುಹೆ, ಗುಹ್ವರಗಳಲ್ಲಿದ್ದು ಇದನ್ನು ಸಾಧಿಸಲಿಲ್ಲ. ನಮ್ಮ ನಿಮ್ಮಂತೆ ಸಮಾಜದ ನಡುವೆಯೇ ಇದ್ದು ನಿರ್ಮಲವಾದ ಮನವನ್ನು ಹೊಂದಿದ್ದರು ಎನ್ನುವುದು ಗಮನಿಸಬೇಕಾದ ವಿಷಯ. ಪ್ರಭುವಿನ ಈ ವಚನ ಅದನ್ನು ಮತ್ತೂ ಪುಷ್ಟೀಕರಿಸುತ್ತವೆ.

**ಮನವ ತೊಳೆದು ನಿರ್ಮಲವ ಮಾಡಿಹೆನೆಂಬ ಯೋಗವೆಂತುಟೊ ?**
**ಮನವ ಹಿಡಿದು ತಡೆದಿಹೆನೆಂಬವರ**
**ಮರುಳುಮಾಡಿ ಕಾಡಿತ್ತು ನೋಡಾ ಮನವು !**
**ಮನ ವಿಕಲ್ಪಜ್ಞಾನದಿಂದರಿದು,**
**ಅದ ಶುದ್ಧವ ಮಾಡಿಹೆನೆಂಬುದು ತಾನೆ ಮನ ನೋಡಾ.**
**ನಮ್ಮ ಗುಹೇಶ್ವರಲಿಂಗದ ಅನುವನರಿದಿಹೆನೆಂಬವರು,**
**ಮನವಿಲ್ಲದಿರಬೇಕು ನೋಡಾ ಸಿದ್ಧರಾಮಯ್ಯಾ.**

ಹೀಗೆ ಅರಿತಷ್ಟೂ ಆಳವಾಗುತ್ತಾ, ಹೊಸ ಹೊಸ ಹೊಳಹನ್ನು ಕೊಡುವ ಶರಣರ ಬದುಕನ್ನು ಅವರ ವಚನಗಳ ಮೂಲಕ, ಕೇವಲ ಬೆರಗುಗಣ್ಣುಗಳಿಂದ ನೋಡುವುದಷ್ಟೆ ನಮಗೆ ಸಾಧ್ಯ! ನಮ್ಮ ಅರಿವಿನ ಹರವು ಅವರ ಮಟ್ಟಕ್ಕೇರಲು ಸಾಧ್ಯವೇ ಎಂಬ ಬಲು ದೊಡ್ಡ ಪ್ರಶ್ನೆಯೊಂದು ನಮ್ಮ ಮುಂದೆ ಬಂದು ನಿಲ್ಲುತ್ತದೆ. ಕಾಲವೇ ಅದಕ್ಕೆ ಉತ್ತರ ನೀಡಬಹುದು.

●

ನಡೆದು ನಡೆದು ಕಡೆಯ ಕಂಡವರು
ನುಡಿದು ನುಡಿದು ಹೇಳುತ್ತಿಹರೆ
ನುಡಿದು ನುಡಿದು ಹೇಳುವನ್ನಕ್ಕರ
ನಡೆದುದೆಲ್ಲಾ ಹುಸಿಯೆಂಬೆನು
ಮಾತಿನ ಮಥನದಿಂದಾದ ಅರಿವು
ಕರಣಮಥನದಿಂದಾದುದಲ್ಲದೆ
ಅನುಪಮ ಸ್ವರಭೇದವಾದ ಪರಿ ಎಂತು
ಹೇಳಾ
ಇದಿರ ಗೆಲಬೇಕೆಂದು ನುಡಿದುಕೊಂಡಡೇನು
ಮನಕ್ಕೆ ಮನವೆ ಸಾಕ್ಷಿಯಾಗಿ ನಿಃಪತಿಯಲ್ಲ
ನೋಡಾ
ಎನ್ನ ಅಜಗಣ್ಣತಂದೆ ಶಬುದಕ್ಕೆ ಹೇಸಿ ಮುಗುದನಾದನು





# ಕನ್ನಡದ ಕಂದ
# ಕೌತುಕದ ಕಿರಣ ರಿಷಿ ಶಿವಪ್ರಸನ್ನ

**ಗೊ.ರು. ಚನ್ನಬಸಪ್ಪ**
*೪೦೬, 'ಪ್ರಣಾಮ' ೩ನೇ ಕ್ರಾಸ್,' ಎಫ್ ರಸ್ತೆ*
*ಐಡಿಯಲ್ ಹೋಮ್ಸ್ ಟೌನ್‌ಷಿಪ್, ೨ನೇ ಹಂತ*
*ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮*
*೯೯೮೦೫೧೨೩೮೯*

"ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿದ ಮಿಂಚಿನಂತೆ, ಬಯಲ ಮರೆಯಲಡಗಿದ ಮರೀಚಿಕೆಯಂತೆ, ಕಂಗಳ ಮರೆಯಲಡಗಿದ ಬೆಳಗಿನಂತೆ ಗುಹೇಶ್ವರಾ, ನಿಮ್ಮ ನಿಲವು!"

ಆತ್ಮಜ್ಞಾನಿ ಅಲ್ಲಮ ಪ್ರಭುವಿನ ಈ ವಚನದಂತೆ, ನಮ್ಮ ಮಧ್ಯೆ ಇದ್ದರೂ, ನಮ್ಮ 'ಮಹಾಮನೆ'ಯ ಓದುಗರಿಗೆ ಮರೆಯಾಗಿರುವ ಕನ್ನಡದ ಕಂದನೊಬ್ಬನನ್ನು ಈ ಸಲದ ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಪರಿಚಯಿಸಲು ಹರ್ಷಿಸುತ್ತೇನೆ. 'ಮಹಾಮನೆ' ಮಾಸಿಕ ಆರಂಭವಾದಂದಿನಿಂದ, ಬಹುಶಃ ಈ ಬಗೆಯ ಪರಿಚಯ ಇದೇ ಮೊದಲೆಂದು ಕಾಣುತ್ತದೆ

ಕನ್ನಡದ ಬಾಲಕನೊಬ್ಬ ತನ್ನ ಸೋಜಿಗದ ಬುದ್ಧಿಶಕ್ತಿಯಿಂದ ಲೋಕದಾಖಲೆ ಸ್ಥಾಪಿಸಿರುವ ಸಂಗತಿಯನ್ನು ನಮ್ಮ ಓದುಗರೊಡನೆ ಹಂಚಿಕೊಳ್ಳುವುದೇ ಒಂದು ಭಾವಪೂರ್ಣ ಅನುಭವ.



**ಗೊ.ರು.ಚ. ಅವರಿಗೆ ರಿಷಿ ಶಿವಪ್ರಸನ್ನ ಕನ್ನಡದಲ್ಲಿ ತನ್ನ ಸಹಿ ಮಾಡಿ ತೋರಿಸುತ್ತಿರುವುದು.**

ಕೆಲವು ದಿನಗಳ ಹಿಂದೆ ಅಂತರ್ಜಾಲದಲ್ಲಿ ನಾನು ನೋಡಿದ ಮಾಹಿತಿಯ ಪೂರ್ಣ ಪಾಠವೊಂದು ಹೀಗಿತ್ತು: "ಇದೇ ಆಗಸ್ಟ್ ೧೫ಕ್ಕೆ ಭಾರತವು ತನ್ನ ೭೫ನೆಯ ಸ್ವಾತಂತ್ರ್ಯೋತ್ಸವವನ್ನು ಆಚರಿಸುವ ಹಿನ್ನೆಲೆಯಲ್ಲಿ, ಪ್ರಧಾನಿ ನರೇಂದ್ರ ಮೋದಿ ಅವರ ಆಶಯದಂತೆ, ಭಾರತ ಸರ್ಕಾರದ ಸಂಸ್ಕೃತಿ ಸಚಿವಾಲಯವು 'ಆಜಾದಿ ಕಾ ಅಮೃತ ಮಹೋತ್ಸವ್' ಎಂಬ ಹೆಸರಿನಲ್ಲಿ ಎಪ್ಪತ್ತೈದು ವಾರಗಳ ಉತ್ಸವವನ್ನು ಆಯೋಜಿಸುತ್ತಿದೆ. ಹಲವಾರು ಸಂಭ್ರಮದ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವ ಈ ಮಹೋತ್ಸವದ ಭಾಗವಾಗಿ, ಇದೇ ತಿಂಗಳ ೯ರಂದು ವಿಶೇಷ

ಧ್ಯೇಯಗೀತೆಯೊಂದನ್ನು ಬಿಡುಗಡೆ ಮಾಡುತ್ತಿದ್ದು, ಆ ಗೀತೆಯಲ್ಲಿ ರಾಷ್ಟ್ರದ ೪೦ ಯುವಸಾಧಕ ಪ್ರತಿಭಾವಂತರನ್ನು ಪರಿಚಯಿಸಲಾಗಿದೆ. ದೇಶದ ಯುವಜನತೆಗೆ ಸ್ಫೂರ್ತಿಯ ಸಂದೇಶ ನೀಡುವುದು ಇದರ ಉದ್ದೇಶವಾಗಿದೆ.



ಉನ್ನತ ಬುದ್ಧಿಮತ್ತೆಯ ಅಂತಾರಾಷ್ಟ್ರೀಯ ಸಂಸ್ಥೆ 'ಮೆನ್ಸಾ'ದ ಸದಸ್ಯ ರಿಷಿ ಶಿವಪ್ರಸನ್ನ

ಮುಂದಿನ ವರ್ಷದ ಸ್ವಾತಂತ್ರ್ಯೋತ್ಸವದವರೆಗೂ ಪ್ರಸಾರವಾಗುವ ಈ ಧ್ಯೇಯಗೀತೆಯಲ್ಲಿ ಕಾಣಿಸಿಕೊಳ್ಳುತ್ತಿರುವ ರಾಷ್ಟ್ರದ ೪೦ ಜನ ಯುವಸಾಧಕರಲ್ಲಿ ಕೇವಲ ಏಳು ವರ್ಷದ, ತನ್ನ ಬುದ್ಧಿಮತ್ತೆಯಿಂದಲೇ ಅಂತಾರಾಷ್ಟ್ರೀಯ ಗಮನವನ್ನು ಸೆಳೆದಿರುವ ವಿಶ್ವದ ಅತ್ಯಂತ ಕಿರಿಯ ವಯಸ್ಸಿನ, 'ಮಾನವಯಂತ್ರ ಸಂಯೋಜನ ಅಭಿವರ್ಧಕ' (Android application developer) ಎಂದೇ ಪರಿಗಣಿಸಲ್ಪಟ್ಟಿರುವ, ಕರಾರುವಾಕ್ಕಾಗಿ ೧೮೦ ಪ್ರಮಾಣದ ಬುದ್ಧಿಮತ್ತೆ (IQ) ಹೊಂದಿರುವ ಮತ್ತು ಇಂಗ್ಲೆಂಡ್ ಮೂಲದ ಪ್ರತಿಷ್ಠಿತ ಮೆನ್ಸಾ (MENSA) ಸಂಸ್ಥೆಯ ಅಂತಾರಾಷ್ಟ್ರೀಯ ಸದಸ್ಯತ್ವ ಪಡೆದಿರುವ ಮೈಸೂರಿನ ರಿಷಿ ಶಿವಪ್ರಸನ್ನ ಕಾಣಿಸಿಕೊಂಡಿರುವುದು ಒಂದು ವಿಶೇಷ. ಈಗಷ್ಟೇ ಎರಡನೆಯ ತರಗತಿಗೆ ಪ್ರವೇಶ ಪಡೆದಿರುವ ರಿಷಿ ಶಿವಪ್ರಸನ್ನನ ಮೂರು ಗಣಕ ಆ್ಯಪ್‌ಗಳು (APP) ಗೂಗಲ್ ಕ್ರೀಡಾ ಕೋಶದಲ್ಲಿ ಸೇರಿದ್ದು, ಅವನು ಬರೆದ ಇಂಗ್ಲಿಷ್ ಪುಸ್ತಕ "ಹ್ಯಾರಿಪಾಟರ್ ಒಡನೆ ಜೀವಸತ್ವ ಕಲಿಯಿರಿ" (Learn Vitamins with Harrypotter) ಜಗತ್ಪ್ರಸಿದ್ಧ ಅಮೆಜ಼ಾನ್ ಅಂಗಡಿಗಳಲ್ಲಿ ಮಾರಾಟಕ್ಕಿದೆ.

ಪ್ರಸಿದ್ಧ ಸಿ.ಎನ್.ಎನ್. ಐ.ಬಿ.ಎನ್. ದೂರದರ್ಶನ ಹಿಸ್ಟರಿ ಚಾನಲ್‌ನಲ್ಲಿ ರಿಷಿ ಪ್ರಸನ್ನನ ಸಂದರ್ಶನ ಪ್ರಸಾರವಾಗಿದೆ. ವ್ಯವಹಾರ ನಿರ್ವಹಣಾ ಸಂಸ್ಥೆ (IBM)ಯೂ ಸೇರಿದಂತೆ, ಹೆಸರಾಂತ ಗಣಕಯಂತ್ರ ಕಂಪನಿಗಳಲ್ಲಿ ರಿಷಿ ಅತಿಥಿಯಾಗಿ ಆಹ್ವಾನಿತನಾಗಿದ್ದಾನೆ. ಇಂತಹ ಮಕ್ಕಳೇ ಭಾರತದ ಭವ್ಯ ಭವಿಷ್ಯತ್ತಿಗೆ ಮುನ್ನುಡಿ ಬರೆಯುತ್ತಾರೆ. ರಿಷಿ ಇನ್ನಷ್ಟು ಸಾಧಿಸಲಿ".


ಡಾ. ಸುಧಾಮೂರ್ತಿ ಅವರೊಂದಿಗೆ

ಈ ಮಾಹಿತಿಯನ್ನು ಓದಿದಾಗ ನಾನು ಸಂಪೂರ್ಣ ಸೋಜಿಗದ ಸೆಳೆತಕ್ಕೆ ಒಳಗಾದೆನೆಂದರೆ ಉತ್ಪ್ರೇಕ್ಷೆಯ ಮಾತಲ್ಲ. ವಿಶ್ವಪ್ರಸಿದ್ಧ 'ಬಿಜೂಸ್' (BIJUS) ಸಂಸ್ಥೆ ರಿಷಿ ಶಿವಪ್ರಸನ್ನನನ್ನು 'ಮಹಾ ಬುದ್ಧಿಶಾಲಿ; ಮಹಾ ಪ್ರತಿಭಾಶಾಲಿ' ಎಂದು ಕರೆದು ಶ್ಲಾಘಿಸಿದೆ. ೨೦೧೯ರಲ್ಲಿ ಭಾರತದ ದಾಖಲೆಗಳ ಪುಸ್ತಕವನ್ನು (Indian Book of Record) ಪ್ರವೇಶಿಸಿರುವ ರಿಷಿ ಶಿವಪ್ರಸನ್ನ ನನಗಂತೂ ಒಂದು ಸೋಜಿಗವೆನಿಸಿ, ಅವನನ್ನು ಕಣ್ಣಾರೆ ನೋಡಬೇಕೆನಿಸಿತು.

ಅಷ್ಟರಲ್ಲಿ, ನನ್ನ ಸೋದರಿಗೆ ಪರಿಚಯವಿದ್ದ ತಾಯಿ ರಾಜೇಶ್ವರಿ ಅವರು ತಮ್ಮ ಪತಿ ಪ್ರಸನ್ನ ಮತ್ತು ಮಗ ರಿಷಿ



ಶಿವಪ್ರಸನ್ನನೊಂದಿಗೆ ನನ್ನ ಮನೆಗೇ ಬಂದರು. ಆ ಬಾಲಕ ನನಗಂತೂ 'ಬಾಲಋಷಿ'ಯಂತೆಯೇ ಕಂಡ. ಅವನನ್ನು ನೋಡಿದ ಯಾರಿಗಾದರೂ ಹಾಗೆ ಅನಿಸದೆ ಇರುವುದಿಲ್ಲ. ತಂದೆ-ತಾಯಿ ತಮ್ಮ ಮಗನನ್ನು ನನ್ನ ಹತ್ತಿರಕ್ಕೆ ಕರೆತಂದು, "ನಿಮ್ಮ ಆಶೀರ್ವಾದವಿರಲಿ" ಎಂದರು. ಅಪ್ಪ-ಅಮ್ಮನಂತೆ ಆ ಬಾಲಕನೂ ನನ್ನ ಪಾದಗಳನ್ನು ಮುಟ್ಟಿ ನಮಸ್ಕರಿಸಿದ. ಅವನ ಹಸ್ತಸ್ಪರ್ಶದಿಂದ ನಾನು ನಿಜಕ್ಕೂ ಭಾವುಕನಾದೆ. ಶರಣ ಸಂಸ್ಕೃತಿಯ ಸಾಕಾರದಂತಿದ್ದ ಅವನನ್ನು ಕಂಡು ಹೃದಯ ತುಂಬಿಬಂದಿತು. ಕೆಲ ನಿಮಿಷಗಳ ಕಾಲ ನಾನು ಮೂಕನಾದೆ.

ನಂತರ, ಅವನನ್ನು ನನ್ನ ಪಕ್ಕಕ್ಕೆ ಕರೆದು ಕೂರಿಸಿಕೊಂಡು ಮಾತನಾಡಿಸಿದೆ. ನಾನು ಅವನನ್ನು ಮೊದಲು ಕೇಳಿದ ಪ್ರಶ್ನೆ: 'ನಿನಗೆ ನಿನ್ನ ತಾಯಿ ಹೆಚ್ಚೋ? ನಿನ್ನ ತಂದೆ ಹೆಚ್ಚೋ?' ಅದಕ್ಕೆ ಆ ಆರೇಳು ವರ್ಷದ ಬಾಲಕ ಏನನ್ನೂ ಹೇಳದೆ, ತಕ್ಷಣ ತನ್ನ ಬೆರಳುಗಳಿಂದ ತನ್ನ ಎರಡೂ ಕಣ್ಣುಗಳನ್ನು ಮುಟ್ಟಿ ತೋರಿಸಿದ. ಆತನ ಉತ್ತರ ಆಕಸ್ಮಿಕವೆಂಬಂತೆ ನನ್ನ ವೃದ್ಧಬುದ್ಧಿಗೂ ಅರ್ಥವಾಗಿ ನಾನು ಪುಳಕಿತನಾದೆ. 'ತಾಯಿ-ತಂದೆ ಎರಡು ಕಣ್ಣುಗಳಿದ್ದಂತೆ. ಎರಡೂ ಹೆಚ್ಚು' ಎಂಬ ಸಂದೇಶವನ್ನೇ ಅವನು ನೀಡಿದ್ದ!

ತಾಯಿ ರಾಜೇಶ್ವರಿ ತನ್ನ ಕರುಳ ಬಳ್ಳಿಯ ಬಗೆಗೆ ಸಹಜ ಅಕ್ಕರೆಯಿಂದ ಅವನ ಪ್ರತಿಭೆ ಮತ್ತು ಆಸಕ್ತಿಗಳ ಬಗೆಗೆ ಹೇಳಿದರು: "ರಿಷಿ ಶಿವಪ್ರಸನ್ನನಿಗೆ ಗಣಕಸಾಧನ ಸಾಗರದಲ್ಲಿ ಈಜಾಡುವುದೆಂದರೆ ತುಂಬ ಶ್ರದ್ಧಾಸಕ್ತಿ. ಅದರಲ್ಲಿ ಅವನು ಎಷ್ಟೋ ಪ್ರಯೋಗಗಳನ್ನು ನಡೆಸಿದ್ದಾನೆ. ತನಗೆ ತಪ್ಪೆನಿಸಿದ ಕಡೆ ತಕ್ಷಣವೇ ತಿದ್ದಿಕೊಳ್ಳುತ್ತಾನೆ. ಎಷ್ಟೋ ಸಲ, ಗಣಕ ಸಾಧನದಲ್ಲಿ ಕೆಲಸ ಮಾಡುವಾಗ ನಮಗೇ ಮಾರ್ಗದರ್ಶನ ಮಾಡುವುದುಂಟು. ಅವನ ಬುದ್ಧಿಶಕ್ತಿಯ ಭಾನ ನಮಗೂ ಬೆರಗೆನಿಸಿದೆ".


ಇಂಗ್ಲೆಂಡಿನ ರೀಡಿಂಗ್ ನಗರದಲ್ಲಿ ನಡೆದ ಮೆನ್ಸ್ ವಾರ್ಷಿಕ ಕೂಟದಲ್ಲಿ ರಿಷಿ ಶಿವಪ್ರಸನ್ನ

ತಾಯಿ ರಾಜೇಶ್ವರಿ ಅವನನ್ನು ಶಾಲೆಗೆ ಸೇರಿಸಲು ಹೋದಾಗ, "ಅವನು ನೇರವಾಗಿ ಎರಡನೆಯ ತರಗತಿಗೆ ಸೇರಲು ಅರ್ಹನಾಗಿದ್ದಾನೆ" ಎಂದು ಶಿಕ್ಷಕರೇ ಹೇಳುತ್ತಾರೆ. ಏಕೆಂದರೆ, ಅವನ ಬುದ್ಧಿಶಕ್ತಿ ಮೊದಲ ತರಗತಿ ಪಠ್ಯಕ್ರಮವನ್ನೇ ಮೀರಿದೆ ಎನ್ನುವುದು

ಶಿಕ್ಷಕರ ಅಭಿಪ್ರಾಯ. ತಂದೆ-ತಾಯಿ ಅವನು ಬಾಲ್ಯವನ್ನು ಚೆನ್ನಾಗಿ ಅನುಭವಿಸುತ್ತಾ, ತನ್ನ ಜೊತೆಯವರೊಡನೆ ನಲಿಯುವಂತಹ ಮತ್ತು ಅವನ ಬುದ್ಧಿಶಕ್ತಿಗೆ ತಕ್ಕ ಸವಾಲುಗಳನ್ನು ಎಸೆಯುವಂತಹ ಮಾರ್ಗಗಳನ್ನು ಅವರು ಹುಡುಕುತ್ತಿದ್ದರು. ಆಗ ಮುಂಬಯಿಯಲ್ಲಿದ್ದ 'ವೈಟ್ ಹ್ಯಾಟ್ ಜ್ಯೂನಿಯರ್' ಎಂಬ ಸಂಸ್ಥೆ ನಡೆಸುವ ಗಣಕ ತಂತ್ರಾಂಶ ತರಗತಿಗಳ ವಿಷಯ ತಿಳಿದು, ಅವನ ಹೆಸರನ್ನು ಅಲ್ಲಿ ನೋಂದಾಯಿಸಿದರು. ನಂತರ ಋಷಿ ಶಿವಪ್ರಸನ್ನನಿಗೆ ಗಣಕ ಸಾಧನವೇ ಎಲ್ಲ ಆಗಿಬಿಟ್ಟಿದೆ. ಸದಾ ಅದರೊಡನೆ ಆಡಿಕೊಂಡಿರುವ ತತ್ಪರತೆ.

ನಾನು ಅವನ ಮೈದಡವುತ್ತಾ, ಸಾಮಾನ್ಯವಾಗಿ ಎಲ್ಲರೂ ಮಕ್ಕಳನ್ನು ಕೇಳುವಂತೆ, "ನಿನ್ನ ಓದು ಮುಗಿದಮೇಲೆ ಮುಂದೆ ಏನಾಗಬೇಕೆಂದಿದ್ದೀಯೆ? ಐ.ಎ.ಎಸ್., ಐ.ಎಫ್.ಎಸ್.ನಂತಹ ಅಧಿಕಾರಿಯಾಗುವೆಯೋ? ಅಥವಾ ಇಂಜಿನಿಯರ್, ವೈದ್ಯ, ವಕೀಲ, ವಿಜ್ಞಾನಿಯಾಗಬೇಕೆನ್ನುವಿಯೋ?" ಎಂದು ಕೇಳಿದೆ. ಅದಕ್ಕೆ ಅವನು, "ನನಗೆ ಪರಿಸರದಲ್ಲಿ ಆಸಕ್ತಿ. ಪರಿಸರ ವಿಜ್ಞಾನಿಯಾಗುವುದು ಇಷ್ಟ" ಎಂದ. ಹಾಗೆಯೇ, ನಾನು ಕೇಳಿದ ಇತರ ಕೆಲವು ಪ್ರಶ್ನೆಗಳಿಗೂ ತಕ್ಷಣವೇ ಸರಿಯುತ್ತರ ಕೊಟ್ಟ. ಏನಿದ್ದರೂ ಅವನದು ಪ್ರಶ್ನೆಗೆ ಉತ್ತರವಷ್ಟೆ. ಹೆಚ್ಚು ಮಾತಿಲ್ಲ. ಅವನಲ್ಲಿ ಹೊರನೋಟಕ್ಕಿಂತ ಒಳನೋಟವೇ ಹೆಚ್ಚಿರುವಂತೆ ನನಗನಿಸಿತು. ಅವನ ಮುಖದಲ್ಲಿ ಅವರ್ಣನೀಯವಾದ ತೇಜಸ್ಸನ್ನು ಕಂಡೆ. ಗಂಭೀರ ನಡೆ, ಗಂಭೀರ ನುಡಿ.




**Learn Vitamins with Harry Potter**

By Rishi Shiv P

ISBN: 9781649835000

Publishing Mode: Xpress

ಋಷಿ ಶಿವಪ್ರಸನ್ನನ ಕೃತಿ

ಅವನ ಚಟುವಟಿಕೆಗಳಲ್ಲೆಲ್ಲ ಸಮತೋಲನವಿರಬೇಕೆಂದು ತಾಯಿಯ ಆಸೆ. "ಪ್ರತಿಯೊಂದರಲ್ಲೂ ಋಷಿ ಬೇಗ ಬೇಸರಗೊಳ್ಳುತ್ತಾನೆ. ಪ್ರತಿದಿನ ಗಣಕಸಾಧನದಲ್ಲಿ ಹೊಸದೇನನ್ನಾದರೂ ಶೋಧಿಸಬಯಸುತ್ತಾನೆ. ಆದರೆ, ಅವನು ಹೊರಜಗತ್ತಿನ ಸಂಪರ್ಕವನ್ನು ಕಳೆದುಕೊಳ್ಳದಂತೆ ನೋಡಿಕೊಳ್ಳಲು, ಗಣಕಫರದೆಯ ಮುಂದೆ ಹೆಚ್ಚುಕಾಲ ಕೂರದೆ ಹೊರಗೆ, ತನ್ನ ಗೆಳೆಯರೊಡನೆ ಆಟವಾಡುವಂತೆ ಉತ್ತೇಜಿಸಿ ಕಳುಹಿಸುತ್ತೇವೆ" ಎನ್ನುತ್ತಾರೆ ಅವನ ತಂದೆ-ತಾಯಿ.

'ನನ್ನ ಅಚ್ಚುಮೆಚ್ಚಿನ ಆಟವೆಂದರೆ ಎಸೆಚೆಂಡಾಟ. ಅದರಲ್ಲಿ ನಾನು ಎಸೆದ ಚೆಂಡನ್ನು ಗುರಿಗೆ ತಾಗಿಸಲು ಗಣಕಸಾಧನದಲ್ಲಿ ಆಟವಾಡುತ್ತೇನೆ' ಎನ್ನುವ ಋಷಿ ಶಿವಪ್ರಸನ್ನನ ಅಸಾಧಾರಣ ಪ್ರತಿಭೆಯ ಬಗೆಗೆ 'ಸ್ಕೋಲ್-ಇನ್' ಎಂಬ ಸಂಚಿಕೆಯ ವರದಿಯ ಸಾರವನ್ನು



ಇಲ್ಲಿ ಉಲ್ಲೇಖಿಸುತ್ತಿದ್ದೇನೆ: 'ಭಾರತದಲ್ಲಿ ಮೂರು ವರ್ಷದ ಮಗುವಿಗೂ ಗಣಕಸಂಕೇತಗಳನ್ನು ಕಲಿಸಲಾಗುತ್ತದೆ. ಅಂತಹ ಕಲಿಕೆಗೆ ತೊಡಗಿದ ಒಂದು ಚಿಗುರು ಚೇತನ ಋಷಿ ಶಿವಪ್ರಸನ್ನ. ಅವನು ಐದು ವರ್ಷದವನಾಗಿದ್ದಾಗಲೇ ಅವನ ಕೈ ಬೆರಳುಗಳು ಗಣಕ ಸಾಧನದ ಕೀಲಿಮಣೆ (Computer Keyboard)ಯ ಮೇಲೆ ನಲಿದಾಡುತ್ತಿದ್ದರೆ, ಅವನ ಕಣ್ಣುಗಳು ಗಣಕಫರದೆಯ ಮೇಲೆ ನೆಟ್ಟಿರುತ್ತಿದ್ದವು. ಇಳಿಬಿಡಿಕೆ (Dropdown) ಪಟ್ಟಿಗಳನ್ನು ತೆರೆದು ಅಡಕ ಕುಣಿಕೆಗಳನ್ನು (Nested Loop) ಕಟ್ಟುವುದೆಂದರೆ ಅವನಿಗೆ ಲೀಲಾಜಾಲ!'



ವಿಯಟ್ನಾಮ್ ಸಾಮಾಜಿಕ ಅಂತರ್ಜಾಲದಲ್ಲಿ ಋಷಿ ಕುರಿತ ಲೇಖನ

ಇದು 'ರೆಕ್ಕೆಯಾಡಿಸುವ ಹಕ್ಕಿಯ ಆಟ' ಎಂದು ತನ್ನ ತಾಯಿಯ ಮೇಜಿನ ಮುಂದೆ ಕುಳಿತು ವಿವರಿಸುತ್ತಾನೆ. ಅವನ ಮನೆ ಇರುವುದು ಬೆಂಗಳೂರಿನಲ್ಲಿ. ಅವನ ಗಣಕದಾಟದ ಸ್ಥಳ – ಆ ಮನೆಯ ಒಂದು ಕೋಣೆಯ ಮೂಲೆ. 'ಹಕ್ಕಿಯಾಟ'ದ ಸೃಷ್ಟಿ ಮುಗಿದಂತೆ, ಅದರ ಹಿನ್ನೆಲೆಗೆ ತನ್ನ ಆಯ್ಕೆಯ ಬಣ್ಣ ತುಂಬುತ್ತಾನೆ. ನಂತರ ಹಕ್ಕಿ ಹಾರುವುದನ್ನು ತಾಯಿಗೆ ತೋರಿಸುತ್ತಾನೆ. ಹಾಗೆ ಆ ಹಿಂದೆ ಅವನು ಸೃಷ್ಟಿಸಿದ ಅಂತಹ ಎಷ್ಟೋ ಆಟಗಳು ಮತ್ತು ವ್ಯಂಗ್ಯಚಿತ್ರಗಳ ಬಗೆಗೆ ತಾಯಿ ರಾಜೇಶ್ವರಿ ಅಭಿಮಾನದಿಂದ ಹೇಳುತ್ತಾರೆ.

ಆ ಮಗುವಿಗಿರುವ ಗಣಕತಂತ್ರಾಸಕ್ತಿ ನಿಜಕ್ಕೂ ವಿಸ್ಮಯಕಾರಿ.

ಋಷಿ ಶಿವಪ್ರಸನ್ನ ಅತ್ಯಂತ ಕುತೂಹಲಶಾಲಿ. ಅವನ ಕಣ್ಣುಗಳು ಸದಾ ಏನನ್ನೋ ಹುಡುಕುತ್ತಿರುವಂತೆ ಕಾಣಿಸುತ್ತವೆ. ವಿಜ್ಞಾನ, ತಂತ್ರಜ್ಞಾನ, ಗಣಿತಶಾಸ್ತ್ರ, ಬಾಹ್ಯಾಕಾಶ ವಿಜ್ಞಾನ ಮತ್ತು ಗಣಕಸಂಕೇತ ತಂತ್ರಗಳ ಬಗೆಗೆ ಅವನಿಗೆ ಪೂರ್ಣ ಆಸಕ್ತಿ. ವ್ಯಾಸಂಗ, ಚದುರಂಗ, ಭಾಷಣ – ಇತ್ಯಾದಿ ನಾನಾ ಸ್ಪರ್ಧೆಗಳಲ್ಲಿ ಅವನು ಅನೇಕ ಪ್ರಶಂಸಾ ಪತ್ರಗಳನ್ನು ಪಡೆದಿದ್ದಾನೆ. ಅವನೊಬ್ಬ ಉತ್ಕಟ ಸಂಕೇತ ತಂತ್ರ ನಿಪುಣ. ಬುದ್ಧಿಮತ್ತೆ ಪರೀಕ್ಷೆ, ಮಕ್ಕಳಿಗೆ ಆ್ಯಪ್, ವಿಶ್ವದ ರಾಷ್ಟ್ರಗಳು, ಇತ್ಯಾದಿ ಅನೇಕ ಯಂತ್ರಮಾನವ ಆ್ಯಪ್‌ಗಳನ್ನು ವಿಕಾಸಗೊಳಿಸಿದ್ದಾನೆ.

ಋಷಿ ಶಿವಪ್ರಸನ್ನನ ವಯಸ್ಸಿನ ಇತರ ಮಕ್ಕಳು ಚಲನವ್ಯಂಗ್ಯಚಿತ್ರಗಳು ಮತ್ತು ಮನರಂಜನಾ ಆಟಗಳನ್ನು ನೋಡುವುದನ್ನು ಇಷ್ಟಪಟ್ಟರೆ, ಈ ಐದು ವರ್ಷದ ಬಾಲಕ, ಅಂತಹ ಚಿತ್ರಗಳು ಮತ್ತು ಆಟಗಳನ್ನೇ ಗಣಕಸಾಧನದಲ್ಲಿ ಸೃಷ್ಟಿಸುತ್ತಾನೆ. ಕೇವಲ ಎರಡು ತಿಂಗಳ ಅವಧಿಯಲ್ಲಿ ಗಣಕಸಾಧನದ ಕಾರ್ಯಕ್ರಮ (programming) ರೂಪಿಸುವುದು ಮತ್ತು ಸಂಬಂಧಿಸಿದ ಮೂಲಭೂತ ತಂತ್ರಗಳನ್ನೆಲ್ಲ ಕಲಿತುಕೊಂಡಿದ್ದಾನೆ. ಈ ವಯಸ್ಸಿನಲ್ಲೇ ಗಣಕತಂತ್ರಕ್ರಮಗಳು ಮತ್ತು ವಿನ್ಯಾಸಗಳನ್ನು ರೂಪಿಸುವಲ್ಲಿ ಪೂರ್ಣ ಅನುಭವ ಗಳಿಸಿದ್ದಾನೆ.

ಋಷಿ ಶಿವಪ್ರಸನ್ನನ ಬಗೆಗೆ ಹೇಳಬೇಕಾದುದು ಬಹಳಷ್ಟಿದ್ದರೂ, ಅವನ ಒಂದು ಗಮನಾರ್ಹ ಸಾಧನೆಯನ್ನು ಇಲ್ಲಿ ತಿಳಿಸಲೇಬೇಕು. ಅವನು ರೂಪಿಸಿರುವ 'ಕೋವಿಡ್ ಹೆಲ್ಪ್ ಬೆಂಗಳೂರು' ಆ್ಯಪ್ ಅವನ ಲೋಕಹಿತ ದೃಷ್ಟಿಗೆ ಸಾಕ್ಷಿಯಾಗಿದೆ. ಆ ಆ್ಯಪ್‌ನಲ್ಲಿ, ಬೆಂಗಳೂರು ನಾಗರಿಕರಿಗೆ ಅನುಕೂಲವಾಗುವಂತೆ, ಹತ್ತಿರದ ಕೋವಿಡ್ ಪರೀಕ್ಷಾ

ಪ್ರಯೋಗಾಲಯ, ಅವುಗಳ ಹೆಸರು, ವಿಳಾಸ, ಸಂಪರ್ಕ ದೂರವಾಣಿ ಸಂಖ್ಯೆ, ಪರೀಕ್ಷಾ ಸಮಯ, ಪರೀಕ್ಷಾ ವೆಚ್ಚ – ಹೀಗೆ ಎಲ್ಲ ಮಾಹಿತಿಯೂ ದೊರೆಯುವಂತೆ ಮಾಡಿದ್ದಾನೆ. ಇದರಿಂದಾಗಿ ಅಗತ್ಯವಿರುವವರು ತಮಗೆ ಹತ್ತಿರವಿರುವ ಕಡೆ ಹೋಗಿ ಸೇವೆ ಪಡೆದುಕೊಳ್ಳಲು ಅನುಕೂಲವಾಗಿದೆ. ಮಾರ್ಗದರ್ಶಕ ಕೈಪಿಡಿಯಂತಿರುವ ಈ ಮಾಹಿತಿ 'ಗೂಗಲ್' ಕೋಶದಲ್ಲೂ ದೊರೆಯುತ್ತದೆ. ಈ ಶೋಧನಾ ರಚನೆಗೆ ಅವನಿಗೆ ಪ್ರೇರಣೆ ಒದಗಿಸಿದ್ದು, ಅವನು ವಾಸಿಸುವ ಮಹಡಿಯ ಒಂದು ಮನೆಯಲ್ಲಿ ಯಾರೋ ಒಬ್ಬರಿಗೆ ಕೋವಿಡ್ ಸೋಂಕಿರುವುದು ತಿಳಿದದ್ದು.

ತನ್ನದೇ ಆದ ಅಂತರ್ಜಾಲ ಮಾಧ್ಯಮ ಹೊಂದಿರುವ ಜಗತ್ತಿನ ಅತ್ಯಂತ ಕಿರಿಯರಲ್ಲಿ ಒಬ್ಬನಾಗಿರುವ ರಿಷಿ ಶಿವಪ್ರಸನ್ನ, ಈಗಾಗಲೇ ಪ್ರಸಾರಮಾಡಿರುವ ಪ್ರತಿಯೊಂದು ಪ್ರಸಂಗವನ್ನೂ ಒಂದು ಅತ್ಯುನ್ನತ ವಿಜ್ಞಾನ ಸಂಬಂಧಿ ವಿಷಯವನ್ನಾಗಿ ಮಾಡಿ, ಅವುಗಳ ಮೇಲೆ ಹೊಸಬೆಳಕು ಚೆಲ್ಲಿದ್ದಾನೆ.



ಇಂಗ್ಲೀಷಿನಲ್ಲಿ ಉನ್ನತ ಕುಶಲತೆ, ತಾರ್ಕಿಕ ನಿರ್ಣಯ, ಗಣಿತ ಕೌಶಲ್ಯ, ಅಮೂರ್ತ ಪರಿಕಲ್ಪನೆಗಳ ಗ್ರಹಿಕೆ ಇತ್ಯಾದಿಗಳ ಪ್ರತಿಭಾವಂತನಾದ ರಿಷಿ ಶಿವಪ್ರಸನ್ನನಿಗೆ ಚದುರಂಗ, ಕ್ರಿಕೆಟ್, ಮನರಂಜನಾ ಕ್ರೀಡೆ ಮತ್ತು ಚಿತ್ರಬಂಧ ಇವುಗಳಲ್ಲೂ ಆಸಕ್ತಿಯಿದೆ.

ಸಮಸ್ಯೆಗಳಿಗಿಂತ ಪರಿಹಾರದ ಬಗೆಗೇ ವಿಚಾರಮಾಡುವ ಅದ್ಭುತ ಚೇತನ ರಿಷಿ ಶಿವಪ್ರಸನ್ನನ ಈ ವಿಕಾಸಕ್ಕೆ ಅವನ ತಂದೆ–ತಾಯಿಗಳ ಪಾತ್ರ ಎಷ್ಟು ಮಹತ್ವದ್ದು ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮಕ್ಕಳ ಕುತೂಹಲ, ಒಲವು, ಶ್ರದ್ಧೆ ಮತ್ತು ಆಸಕ್ತಿಗಳನ್ನು ಸೂಕ್ಷ್ಮವಾಗಿ ಗಮನಿಸಿ ಹೆತ್ತವರು ಸೂಕ್ತವಾದ ಉತ್ತೇಜನ ನೀಡಿದರೆ, ಮಕ್ಕಳ ಪ್ರತಿಭಾವಿಕಾಸ ಹೇಗೆ ಆಗುತ್ತದೆ ಎನ್ನುವುದಕ್ಕೆ ರಿಷಿ ಶಿವಪ್ರಸನ್ನನೇ ಸಾಕ್ಷಿ;

ಕನ್ನಡದ ಈ ಹೆಮ್ಮೆಯ ಕಂದನಿಗೆ ಕನ್ನಡಿಗರೆಲ್ಲರ ಶುಭ ಹಾರೈಕೆ ಇರಲಿ!

### ರಿಷಿ ಶಿವಪ್ರಸನ್ನನ ಸಾಧನೆಗಳು

* ಬುದ್ಧಿಮತ್ತೆಯ ಮಾನದಂಡದಲ್ಲಿ ೧೮೦ ಪ್ರಮಾಣ ಸೂಚಿಯ ಅತ್ಯಂತ ಕಿರಿಯ ಭಾರತೀಯ 'ಮೆನ್ಸಾನ್' (ಅಂತಾರಾಷ್ಟ್ರೀಯ ಸಂಸ್ಥೆ' ಸದಸ್ಯ)
* ೨೦೧೯ರ ಸೆಪ್ಟೆಂಬರ್‌ನಲ್ಲಿ ಇಂಗ್ಲೆಂಡಿನಲ್ಲಿ ನಡೆದ ಬ್ರಿಟಿಷ್ 'ಮೆನ್ಸಾ' ವಾರ್ಷಿಕ ಸಮಾವೇಶದಲ್ಲಿ ಪಾಲುಗೊಂಡಿದ್ದ ಅತ್ಯಂತ ಕಿರಿಯ.
* ಪ್ರಸಿದ್ಧ ಇನ್‌ಫೋಸಿಸ್ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಸುಧಾಮೂರ್ತಿ ಅವರ ಮನೆಯ ಅತಿಥಿಯಾಗಿ ಆಹ್ವಾನಿತ.
* ಅತ್ಯಂತ ಕಿರಿವಯಸ್ಸಿನ 'ಮಾನವಯಂತ್ರ ಆ್ಯಪ್ ಅಭಿವರ್ಧಕ'ಎಂಬ ದೃಢ ಪತ್ರ.



* ಗಣಕಸಾಧನದ ಸಂಕೇತ ಭಾಷೆಯ ಕ್ರಮದಲ್ಲಿ ಅತ್ಯುನ್ನತ ಪ್ರತಿಭೆಯ ಆರು ಮಕ್ಕಳಲ್ಲಿ ಒಬ್ಬನೆಂದು ಪರಿಗಣನೆ.
* 'ಗೂಗಲ್' ಕ್ರೀಡಾ ಕೋಶದಲ್ಲಿನ ಆ್ಯಪ್‌ಗಳ ಪಟ್ಟಿಯಲ್ಲಿ ಸೇರ್ಪಡೆ.
* ಭಾರತ ಗಣಕ ತಂತ್ರಾಂಶ ಪ್ರಯೋಗಾಲಯದ ಅತಿಥಿ.
* ವಾಣಿಜ್ಯ ವ್ಯವಹಾರ ಸಂಸ್ಥೆಯಿಂದ ಅತಿಥಿ ಭಾಷಣಕಾರನಾಗಿ ಆಹ್ವಾನಿತ.
* ಅತ್ಯುನ್ನತ ಬುದ್ಧಿಮತ್ತೆಗಾಗಿ ಭಾರತೀಯ ದಾಖಲೆಗಳ ಪುಸ್ತಕದಲ್ಲಿ ಸೇರ್ಪಡೆ.
* ತಂತ್ರಾಂಶ ಕೌಶಲ್ಯ, ಚದುರಂಗ ಮತ್ತು ಭಾಷಣ ಸ್ಪರ್ಧೆಗಳಲ್ಲಿ ಪದಕ ಮತ್ತು ಪ್ರಶಂಸನ ಪತ್ರಗಳು.
* 'ಹ್ಯಾರಿ ಪಾರ್ಟರ್‌ನೊಂದಿಗೆ ಜೀವಸತ್ವ ಕಲಿಯಿರಿ' ಕಥಾಕೃತಿ ರಚನೆ.

### ಮಾಹಿತಿ

ಪೂರ್ಣ ಹೆಸರು: ರಿಷಿ ಶಿವಪ್ರಸನ್ನ; ಜನ್ಮದಿನಾಂಕ:೨೮.೧೨.೨೦೧೩; ತಂದೆ: ಪ್ರಸನ್ನಕುಮಾರ್; ತಾಯಿ: ರಾಜೇಶ್ವರಿ; ಸ್ಥಳ: ಬೆಂಗಳೂರು; ಪೌರತ್ವ: ಭಾರತೀಯ; ಬಲ್ಲ ಭಾಷೆ: ಕನ್ನಡ ಮತ್ತು ಇಂಗ್ಲಿಷ್; ಸಾಮರ್ಥ್ಯ: ಗಣಕ ತಂತ್ರಜ್ಞಾನ, ವಾಚನ ಪ್ರತಿಭೆ, ಸಾಮಾನ್ಯ ಜ್ಞಾನ, ಉತ್ತಮ ಗ್ರಹಿಕೆ, ಉತ್ತಮ ನಿರೂಪಣಾ ಕೌಶಲ್ಯ, ಉತ್ತಮ ಸೃಜನಶೀಲತೆ

ತಂದೆ ದೂರವಾಣಿ : ೯೯೮೦೫ ೩೧೦೩೭ ತಾಯಿ: ೯೯೮೦೫ ೩೧೦೩೮

ರಿಷಿ ಶಿವಪ್ರಸನ್ನ ಫೇಸ್‌ಬುಕ್ ಪುಟ: https:/www.facebook.com Shiv-P-761351900948819

ಯೂಟ್ಯೂಬ್ ಮಾಧ್ಯಮ : https:/www.youtube.com Channel/UCGvnMGet2 97LGXSK/wiULA

●

ನಿಮ್ಮ ತೇಜವ ನೋಡಲೆಂದು ಹೆರೆಸಾರಿ ನೋಡುತ್ತಿರಲು
ಶತಕೋಟಿ ಸೂರ್ಯರು ಮೂಡಿದಂತಿರ್ದುದಯ್ಯ
ಮಿಂಚಿನ ಬಳ್ಳಿಯ ಸಂಚವ ಕಂಡೆ
ಎನಗಿದು ಸೋಜಿಗವಾಯಿತ್ತು
ಗುಹೇಶ್ವರ
ನೀನು ಜ್ಯೋತಿರ್ಲಿಂಗವಾದರೆ
ಉಪಮಿಸಿ ನೋಡಬಲ್ಲವರಿಲ್ಲಯ್ಯ



# ಕ್ಷೇತ್ರ, ವಾರ್ತೆಗಳು




ಇಂಡಿ : ಲಿಂ, ಸಂಗಮ್ಮ ಸಾತನಗೌಡ ಬಗಲಿ ದತ್ತಿ ಉಪನ್ಯಾಸ ದಿನಾಂಕ.೩೦.೯.೨೦೨೧
ಚಿತ್ರದಲ್ಲಿ, ಪ್ರಭಾಕರ ಎಸ್.ಬಗಲಿ, ನೀಲಕಂಠಗೌಡ, ಪಾಟೀಲ. ಎಮ್.ಪಿ.ಭೈರಜಿ, ಗಂಗಾ ಗಲಗಲಿ.
ಪಿ.ಎಲ್.ಹುಗಾರ. ಬಿ.ಎನ್.ರಾಠೋಡ










ದಾವಣಗೆರೆ: ಲಿಂ. ದಾವಣಗೆರೆ ರಾಜಶೇಖರಯ್ಯ ಮತ್ತು ಲಿಂ.ಆರ್. ದಯಾನಂದ್ ದತ್ತಿ
ಹಾಗೂ ಲಿಂ. ಸಿದ್ದಮ್ಮ ಮತ್ತು ಲಿಂ. ಚನ್ನಬಸಪ್ಪ ದತ್ತಿ ಉಪನ್ಯಾಸ, ದಿನಾಂಕ:೨೩.೧೦.೨೦೨೧
ಚಿತ್ರದಲ್ಲಿ: ವಿನೋದ ಅಜಗಣ್ಣನವರ, ಮಮತಾ ನಾಗರಾಜ್, ವಸಂತ ಕೆ.ಆರ್., ಸೌಮ್ಯ ಸತೀಶ್



ಕದಳಿ ಮಹಿಳಾ ವೇದಿಕೆ,
ತುಮಕೂರು: ಕದಳಿ ಮಾಸಿಕ ಸಭೆ,
ದಿನಾಂಕ:೧೬.೧೦.೨೦೨೧
ಚಿತ್ರದಲ್ಲಿ: ನಾಗರತ್ನ ಚಂದ್ರಪ್ಪ,
ಶಿವಲಿಂಗಮ್ಮ, ಎಂ.ಸಿ. ಲಲಿತಾ,
ಗಿರಿಜಾ ವಿರೂಪಾಕ್ಷ, ಶಿವಮ್ಮ
ಚಂದ್ರಶೇಖರ್, ರಾಚಮ್ಮ, ಜಯರತ್ನ
ಉದಯ್, ವಿಮಲ ಶಿವಸ್ವಾಮಿ






ತುಮಕೂರು: ವಚನಗೋಷ್ಠಿ ಕಾರ್ಯಕ್ರಮ ಮತ್ತು ತುಮಕೂರು ತಾಲೂಕು ಶ.ಸಾ.ಪ. ಘಟಕಕ್ಕೆ ನೂತನ ಅಧ್ಯಕ್ಷರ ಪದಸ್ವೀಕಾರ,
ದಿನಾಂಕ:೨೧.೧೦.೨೦೨೧
ರಾಜಶೇಖರಯ್ಯ ಈಚನೂರು, ಎಂ.ಜಿ. ಸಿದ್ಧರಾಮಯ್ಯ, ಹಂಸಿ ಕುಮಾರಸ್ವಾಮಿ, ಮಿಮಿಕ್ರಿ ಈಶ್ವರಯ್ಯ, ಶಿವಕುಮಾರ್,
ಶಿವಾನಂದ, ಚಂದ್ರಶೇಖರ, ಮಹಾದೇವಮ್ಮ



## ಶ್ರೀ ಎಸ್. ರುದ್ರೇಗೌಡರು

ವಿಧಾನ ಪರಿಷತ್ ಸದಸ್ಯರು ಹಾಗೂ ಕೈಗಾರಿಕೋದ್ಯಮಿಗಳು, ಶಿವಮೊಗ್ಗ
ಇವರು "ಶರಣರಾದ ಶ್ರೀಮತಿ ಶಾಂತಮ್ಮ ಲಿಂ. ಡಿ.ಜಿ. ಶಿವಣ್ಣಗೌಡರ"
ಹೆಸರಿನಲ್ಲಿ ಒಂದು ಲಕ್ಷ ರೂ.ಗಳ ದತ್ತಿಯನ್ನು ಅಖಿಲ ಭಾರತ ಶರಣ ಸಾಹಿತ್ಯ
ಪರಿಷತ್ತಿನಲ್ಲಿ ದಿನಾಂಕ: ೨೫.೧೦.೨೦೨೧ರಂದು ಸ್ಥಾಪಿಸಿರುತ್ತಾರೆ.

## ಶ್ರೀಮತಿ ಸುಕನ್ಯಾ ಮತ್ತು ಶ್ರೀ ಬಸಲಿಂಗಯ್ಯ ರುದ್ರಯ್ಯ ಹಿರೇಮಠ

ಇವರು "ಲಿಂ. ರುದ್ರಯ್ಯ
ಬಸಲಿಂಗಯ್ಯ ಹಿರೇಮಠ" ಅವರ
ಹೆಸರಿನಲ್ಲಿ ಒಂದು ಲಕ್ಷದ ಎಂಟು
ರೂ.ಗಳ ದತ್ತಿಯನ್ನು ಅಖಿಲ ಭಾರತ
ಶರಣ ಸಾಹಿತ್ಯ ಪರಿಷತ್ತಿನಲ್ಲಿ
ದಿನಾಂಕ:೨೫.೧೦.೨೦೨೧ರಂದು
ಸ್ಥಾಪಿಸಿದ್ದಾರೆ.



## ಶ್ರದ್ಧಾಂಜಲಿ





**ಲಿಂ.: ಶ್ರೀಮತಿ ಸರಸ್ವತಿ ಶರಣಯ್ಯಾ ಮಠಪತಿ**

ಮು: ಶಹಾಬಾದ ತಾಲೂಕ

ಜನನ:೧.೧.೧೯೫೦ ಲಿಂಗೈಕ್ಯ: ೧೪.೧೦.೨೦೨೧

ಪತಿ ಇಬ್ಬರು ಪುತ್ರರು, ಮೂರು ಜನ ಹೆಣ್ಣುಮಕ್ಕಳು, ಹನ್ನೊಂದು ಜನ ಮೊಮ್ಮಕ್ಕಳು, ಅಳಿಯಂದಿರು ಮತ್ತು ಅಪಾರ ಬಂಧು-ಬಳಗವನ್ನು ಬಿಟ್ಟು ಅಗಲಿದ್ದಾರೆ.

**ಶರಣಯ್ಯಾ ಸೋಮಯ್ಯಾ ಮಠಪತಿ**

ಮು: ಶಹಾಬಾದ

ಜಿಲ್ಲೆ: ಕಲಬುರಗಿ

ಮೊ: ೮೨೭೭೧ ೧೪೮೪೪





**ಜವಳಿ ಚಿಕ್ಕವೀರಪ್ಪ ನಂಜಮ್ಮ ಸ್ಮಾರಕ ದತ್ತಿ**

ಬೆಂಗಳೂರು: ದಿನಾಂಕ: ೨೬.೧೦.೨೦೨೧ ಚಿತ್ರದಲ್ಲಿ: ಚಂದ್ರಪ್ಪ, ಬಸವರಾಜಣ್ಣ, ಡಾ. ಪ್ರೇಮಾ ಸಿದ್ಧರಾಜು, ರೆ.ಫಾ. ಅಬ್ರಹಾಂ ಪಿ.ಜೆ., ಡಾ. ಸಿ. ಸೋಮಶೇಖರ್, ಡಾ. ಮಾದೇಶ್, ಕೆ.ವಿ. ನಾಗರಾಜಮೂರ್ತಿ, ಶಶಿಕಲಾ



**ಚಿಂಚೋಳಿ: ಲಿಂ. ಜಗದೇವಿ ಬೇಮಳಗಿ ಸುಲೇಪೇಟ ದತ್ತಿ**

ದಿ:೨.೧೦.೨೦೨೧ ಚಿತ್ರದಲ್ಲಿ: ರಾಚಪ್ಪ ಭದ್ರಶೆಟ್ಟಿ, ಡಾ. ಶಿವಶರಣಪ್ಪ ಮೋತಕಪಳ್ಳಿ, ಹಣಮಂತಪ್ಪ ಬೇಮಳಗಿ, ಪ್ರೊ. ಕುಪೇಂದ್ರ ಪಾಟೀಲ, ದೇವೀಂದ್ರ ಹೋಳ್ಕರ್, ಮಲ್ಲಿಕಾರ್ಜುನ ಪಾಲಾಮೂರ, ಬಸವರಾಜ ಐನೋಳಿ



**ವಿಜಯಪುರ : ಲಿಂ. ಸಂಕಮ್ಮ ಗದಗ ದತ್ತಿ ಮತ್ತು ಲಿಂ. ಬಸಪ್ಪ ಸಾಲಕ್ಕಿ ದತ್ತಿ**

ದಿನಾಂಕ:೨೨.೯.೨೦೨೧, ಚಿತ್ರದಲ್ಲಿ: ಮಲ್ಲಮ್ಮ ಬಿರಾದಾರ, ವಿ.ಸಿ. ನಾಗಠಾಣ, ಮ.ಗು. ಯಾದವಾಡ, ಬಸವರಾಜ ತೊಡ್ಡಿ, ಜಂಬುನಾಥ ಕಂಚ್ಯಾಣಿ, ಸೋಮನಾಥ ಸಮಗೊಂಡ, ಭಾರತಿ ಭೂಯಾರ, ಅಮರೇಶ ಸಾಲಕ್ಕಿ, ಎಸ್.ವೈ. ಗದಗ

Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine
Date of Publication 1 November 2021
Total Pages 60 (Include Cover Pages)



ಮುದ್ದೇಬಿಹಾಳ: ಲಿಂ. ಶಂಕರಪ್ಪ ವಿರುಪಾಕ್ಷಪ್ಪ ತಡಸದ ದತ್ತಿ

ದಿನಾಂಕ:೨೦.೧೦.೨೦೨೧ ಚಿತ್ರದಲ್ಲಿ: ಅಶೋಕ ಶಂಕರಪ್ಪ ತಡಸದ, ಬಸವರಾಜ ನಾಲತವಾಡ, ಶಿವಾನಂದ ತಡಸದ, ಎಂ.ಎಂ. ಬೆಳಗಲ್, ರವಿ ತಡಸದ, ಎಸ್.ಬಿ. ಕನ್ನೂರ, ಪ್ರಭು ಕಡಿ, ಅಶೋಕ ತಡಸದ, ಮಹಾಂತಪ್ಪ ನಾವದಗಿ, ಎಸ್.ಎನ್. ಪೋಲೇಶಿ, ಎ.ಬಿ. ಕುಲಕರ್ಣಿ, ಆರ್.ಎನ್. ಪಾಟೀಲ್, ವಿರುಪಾಕ್ಷಪ್ಪ ತಡಸದ, ಅಬ್ದುಲ್ ರಹಮಾನ್ ಬಿದರಕುಂದಿ, ಆರ್.ಕೆ. ಕುಲಕರ್ಣಿ, ವೀರಣ್ಣಾ ತಡಸದ, ಎಸ್. ಜಿ. ನಂದಿ, ಬಾಪುಗೌಡ ಪಾಟೀಲ, ಎಸ್.ಎಸ್. ಕರಡ್ಡಿ, ಸಂಗಮೇಶ ನಾವದಗಿ, ಸಂಗಣ್ಣ ಕತ್ತಿ



ತಾಳಿಕೋಟೆ: ಶಿವಶರಣೆ ಗಂಗಾಂಬಿಕೆ ಶರಣೋತ್ಸವ

ದಿ:೨೦.೧೦.೨೦೨೧ ಚಿತ್ರದಲ್ಲಿ:ಜಿ.ಎಸ್. ಜಮ್ಮಲದಿನ್ನಿ, ಈರಣ್ಣ ಕಲಬುರ್ಗಿ, ಜೆ.ಸಿ. ಹಿರೇಮಠ, ಉಮಾ ಛಿವಾರಿ

ಶ್ರೀ ಗಂಗಾಧರ ಪಂಡಿತ
ನಂ. 13, 'ಶ್ರೀಚಕ್ರ' 8ನೇ ಮೇನ್, 3ನೇ ಕ್ರಾಸ್,
ಶ್ರೀನಿಧಿ ಬಡಾವಣೆ, ಕೋಣನಕುಂಟೆ,
ಬೆಂಗಳೂರು– 062
98457 05506

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1, 3rd Cross, 2nd Main Road,
Kasturiba Nagar, Bengaluru - 560 026

Editor : Dr. M.S. Ashadevi